# ಅಚಲ

ಸಂಪುಟ - 12
ಸಂಚಿಕೆ - 5 ಮತ್ತು 6

ದ್ವೈಮಾಸಿಕ

ನವೆಂಬರ್ 1998
ಜನವರಿ 1999

ಒಳಪುಟಗಳಲ್ಲಿ



ಜಾಗೃತಿ

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಕೇರಳದಲ್ಲಿ ಪಂಚಾಯತ್ ರಾಜ್ಯ ಮತ್ತು ಜನರೂಪಿತ ಯೋಜನೆಯ ಪ್ರಯೋಗದಲ್ಲಿ ಮಹಿಳೆಯರು

*- ಜಿ. ಎಸ್. ನಾಗರಾಜ್*

ಇತ್ತೀಚಿನ ಒಂದು ವರ್ಷದಲ್ಲಿ ಪತ್ರಿಕೆಗಳಲ್ಲಿ ಮತ್ತೆ ಮತ್ತೆ ಕೇರಳದ ಹೊಸ ಪ್ರಯೋಗದ ಬಗ್ಗೆ ಸುದ್ದಿ, ವಾದ-ವಿವಾದಗಳು. ಅದನ್ನು ಗಮನಿಸುತ್ತಾ ಹೋದಂತೆ ನನ್ನ ಆಸಕ್ತಿ, ಕುತೂಹಲ ಬೆಳೆಯುತ್ತಿತ್ತು. ಏಕೆಂದರೆ ಕೇರಳದ ಗ್ರಂಥಾಲಯ ಚಳುವಳಿಯ ಬಗ್ಗೆ ಕೇಳಿ ತಿಳಿದ, ನಂತರ ಕೇರಳದಲ್ಲುದಿಸಿ ದೇಶಕ್ಕೆಲ್ಲಾ ಹಬ್ಬಿದ ವಿಜ್ಞಾನ ಚಳುವಳಿ, ಸಾಕ್ಷರತಾ ಚಳುವಳಿಯ ಬಗ್ಗೆ ಪ್ರತ್ಯಕ್ಷವಾಗಿ ಅಷ್ಟಿಷ್ಟು ನೋಡಿದ್ದ ನನಗೆ ಈ ಸುದ್ದಿ-ವಿವಾದಗಳ ಮೂಲದಲ್ಲಿ ಒಂದು ಮಹತ್ವದ, ನಾವು ಕಂಡರಿಯದ ಒಂದು ಹೊಸ ಪ್ರಯೋಗ ನಡೆಯುತ್ತಿದೆ ಎನ್ನುವುದು ಅರಿವಾಗುತ್ತಿತ್ತು. ಇದ್ದಕಡೆಯಿಂದಲೇ ಜನರೂಪಿತ ಯೋಜನೆಯ ಚಳುವಳಿ ಬಗ್ಗೆ ಸಿಗುವ ಮಾಹಿತಿಯನ್ನೆಲ್ಲಾ ಸಂಗ್ರಹಿಸುತ್ತಿದ್ದೆ. ಯಾವಾಗ ಅದನ್ನು ಪ್ರತ್ಯಕ್ಷ ನೋಡುತ್ತೇನೋ ಎಂದು ತವಕಿಸುತ್ತಿದ್ದ ನನ್ನ ಮನಸ್ಸಿಗೆ ಇತ್ತೀಚಿಗೆ 22 ರಿಂದ 27ರವರೆಗೆ ಕೇರಳಕ್ಕೆ ಭೇಟಿ ನೀಡಲು ಲಭಿಸಿದ ಅವಕಾಶ ಹಾಲೆರೆದಂತಾಯ್ತು. ಆ ಭೇಟಿಯ ಸಮಯದಲ್ಲಿ ನೋಡಿದ ಕೇರಳದ ಪಂಚಾಯತ್ ರಾಜ್ ಹಾಗೂ ಜನರೂಪಿತ ಯೋಜನೆಯ ಚಳುವಳಿಯಲ್ಲಿ ಮಹಿಳೆಯರ ಪಾತ್ರದ ಬಗ್ಗೆ ಕೆಲವು ಅಂಶಗಳನ್ನೂ ನಿಮ್ಮ ಮುಂದಿರಿಸಬಯಸುತ್ತೇನೆ.

ಭಾರತದಲ್ಲಿ ಸಮಾಜದ ವಿಜ್ಞಾನದ ಪ್ರಭಾವಶಾಲಿ ಪತ್ರಿಕೆಯಾದ ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲೀ (ಅರ್ಥಶಾಸ್ತ್ರೀಯ ಮತ್ತು ರಾಜಕೀಯ ವಾರಪತ್ರಿಕೆ)ಯಲ್ಲಿ 97ರ ನವೆಂಬರ್ ವೇಳೆಗೆ ಅಂತರರಾಷ್ಟ್ರೀಯ ಖ್ಯಾತಿಯ ಸಮಾಜ ವಿಜ್ಞಾನಿಗಳು "ಕೇರಳ ವಿಕೇಂದ್ರಿಕರಣ ಯೋಜನೆ ಇಂದು ವಿಶ್ವದಲ್ಲಿಯೇ ಅತ್ಯಂತ ದೊಡ್ಡದು" ಎಂದು ಉದ್ಗಾರ ತೆಗೆದಿದ್ದರು. ಒಂದು ಹೊಸ ಅಭಿವೃದ್ಧಿ ಸಂಸ್ಕೃತಿಯ ಸೃಷ್ಟಿ - ಪ್ರಜಾಸತ್ತಾತ್ಮಕವಾದ, ಜನರು ಎಲ್ಲ ಹಂತಗಳಲ್ಲಿಯೂ ಭಾಗವಹಿಸುವ, ಪರಸ್ಪರ ಬಡಿದಾಡುತ್ತಾ ಅನೇಕ ಅಭಿವೃದ್ಧಿ ಯೋಜನೆಗಳು ಕುಂಠಿತವಾಗಲು ಕಾರಣವಾಗಿರುವ ರಾಜಕೀಯ ಪಕ್ಷಗಳ ತಕ್ಷಣದ ಚುನಾವಣಾ ಗುರಿಗಳನ್ನು ಮೀರಲು ಸಾಧ್ಯವಾದ ಅಭಿವೃದ್ಧಿ ಸಂಸ್ಕೃತಿಯನ್ನು ರೂಪಿಸುವುದೇ ಈ ಪ್ರಯೋಗದ ಗುರಿ. ಈ ಪ್ರಯೋಗದಲ್ಲಿ ಪ್ರಧಾನಪಾತ್ರ ನೇರ ಜನರು ಹಾಗೂ ಸ್ಥಳೀಯ ಸಂಸ್ಥೆಗಳಾದ ಪಂಚಾಯತ್ ರಾಜ್ಯ ಸಂಸ್ಥೆಗಳು ಮತ್ತು ಪುರಸಭೆ, ನಗರಸಭೆಗಳಿಗೆ. ಈ ಪ್ರಯೋಗದಿಂದ ಜನರ ಅರ್ಧಭಾಗವೇ ಆದ ಹಾಗೂ ಪಂಚಾಯತ್ ರಾಜ್ಯ ಸಂಸ್ಥೆಗಳಲ್ಲಿ ಮೂರನೇ ಒಂದು ಭಾಗದಷ್ಟು ಪ್ರತಿನಿಧಿಗಳನ್ನು ಹೊಂದಿರುವ ಮಹಿಳೆಯರ ಮೇಲಾಗಿರುವ ಪರಿಣಾಮವೇನು?

### ಕೇರಳದ ಮಾನವ ಅಭಿವೃದ್ಧಿಯ ಉನ್ನತ ಮಟ್ಟ:

ಈ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳುವ ಮೊದಲು ಕೆಲ ಸಂಗತಿಗಳನ್ನು ತಿಳಿದುಕೊಳ್ಳುವುದು ಅವಶ್ಯಕ. ಕೇರಳ ಇಂದು ಭಾರತದಂತಹ ಹಿಂದುಳಿದ ದೇಶದ ಭಾಗವೇ ಆಗಿದ್ದರೂ ಅಲ್ಲಿಯ ಮಾನವ ಅಭಿವೃದ್ಧಿ ಸೂಚಿಗಳು ಪ್ರಪಂಚದ ಅಭಿವೃದ್ಧಿ ಹೊಂದಿದ ದೇಶಗಳ ಸಾಲಿನಲ್ಲಿವೆ ಎಂದು ವಿಶ್ವಸಂಸ್ಥೆಯ ವರದಿಗಳು ಸಾರುತ್ತವೆ. ಸಾಕ್ಷರತೆಯಲ್ಲಿ, ಶಿಕ್ಷಣ ಮಟ್ಟದಲ್ಲಿ, ಐದು ವರ್ಷದೊಳಗಿನ ಶಿಶುಗಳ ಸಾವಿನ, ಹೆರಿಗೆಯ ಸಮಯದಲ್ಲಿನ ಮಹಿಳೆಯರ ಸಾವಿನ ಹಾಗೂ ಜನಸಂಖ್ಯೆಯ ಬೆಳವಣಿಗೆಯ ಅತಿ ಕಡಿಮೆ ಪ್ರಮಾಣದಲ್ಲಿ ಇದನ್ನು ಗುರುತಿಸುತ್ತಾರೆ.

ದೇಶದಲ್ಲಿಯೇ ಅತಿ ಹೆಚ್ಚು ಸಾಕ್ಷರತೆ ಶೇ. 91 (1991ರ ಜನಗಣತಿಯ ವೇಳೆಗೆ) ನ್ನು ಪಡೆದಿರುವ ಕೇರಳದಲ್ಲಿ ಮಹಿಳಾ ಸಾಕ್ಷರತೆಯೂ ಹೆಚ್ಚು. ಈ ಎಲ್ಲ ಉತ್ತಮ ಮಾನವ ಅಭಿವೃದ್ಧಿ ಸೂಚ್ಯಾಂಕಗಳಿಗೆ ಮೂಲ ಕಾರಣ ಅಲ್ಲಿ 1957ರಲ್ಲಿ ಎರಡನೇ ಮಹಾಚುನಾವಣೆಯ ಸಂದರ್ಭದಲ್ಲಿಯೇ ಬಂದ ಎಡಪಂಥೀಯ ಸರ್ಕಾರ ತಂದ ಭೂಸುಧಾರಣೆ ಹಾಗೂ ಕನಿಷ್ಠ ಕೂಲಿ. 27 ಲಕ್ಷ ಕುಟುಂಬಗಳಿಗೆ ಭೂಮಿ, 10 ಲಕ್ಷ ಭೂರಹಿತ ಕೂಲಿಕಾರ ಕುಟುಂಬಗಳಿಗೆ ಮನೆ ಹಾಗೂ ಅದರ ಸುತ್ತ 4 ಗುಂಟೆ ಹಿತ್ತಲು ಸ್ಥಳ, ಜೊತೆಗೆ ಕೃಷಿಕೂಲಿಕಾರರಿಗೆ ಹೆಚ್ಚು ಕೂಲಿ. ಇವುಗಳ ಫಲವಾಗಿ ಪ್ರತಿ ಕೂಲಿಕಾರನ ಬಡರೈತನ ಮಕ್ಕಳೂ - ಹೆಣ್ಣಿರಲಿ, ಗಂಡಿರಲಿ - ಪಡೆಯುವ ವಿದ್ಯಾಭ್ಯಾಸ.

### ಕೇರಳದ ಮಹಿಳಾ ಸದಸ್ಯರು:

ಈ ಹಿನ್ನೆಲೆಯನ್ನು ಗಮನಿಸಿ ಅಲ್ಲಿಯ ಮಹಿಳಾ ಪಂಚಾಯತ್ ಸದಸ್ಯರ ಬಗ್ಗೆ ತಿಳಿದುಕೊಳ್ಳೋಣ. ಕೇರಳದ

ಒಟ್ಟು 14,173 ಪಂಚಾಯತ್ ಸದಸ್ಯರಲ್ಲಿ 5,078 ಎಂದರೆ ಶೇ. 36ಭಾಗ ಮಹಿಳೆಯರು. ಇದರಲ್ಲಿ ಶೇ. 10 ಭಾಗ ಚುನಾಯಿತ ಸದಸ್ಯರಾಗಿ ಅನುಭವವಿದ್ದವರು. (ಪುರುಷರಲ್ಲಿ ಹೀಗೆ ಹಿಂದೆ ಚುನಾಯಿತ ಸದಸ್ಯರಾಗಿದ್ದವರ ಸಂಖ್ಯೆ ಶೇ. 27) ಪುರುಷರಿಗೆ ಹೋಲಿಸಿದರೆ ಮಹಿಳಾ ಸದಸ್ಯರೇ ಹೆಚ್ಚು ವಿದ್ಯಾಭ್ಯಾಸ ಪಡೆದವರು. ಪುರುಷರಲ್ಲಿ ಶೇ. 20ರಷ್ಟು ಪ್ರೌಢ ಶಾಲಾ (ಹೈಸ್ಕೂಲ್) ಮಟ್ಟಕ್ಕಿಂತ ಕೆಳಗಿನ ಶಿಕ್ಷಣ ಪಡೆದವರಾದರೆ ಮಹಿಳೆಯರಲ್ಲಿ ಅವರ ಸಂಖ್ಯೆ ಕೇವಲ ಶೇ. 11. ಮಹಿಳಾ ಸದಸ್ಯರಲ್ಲಿ ಶೇ. 18ರಷ್ಟು ಪದವಿ (ಡಿಗ್ರಿ) ಹಾಗೂ ಹೆಚ್ಚಿನ ವಿದ್ಯಾಭ್ಯಾಸ ಪಡೆದವರಾದರೆ ಆ ವಿದ್ಯಾಭ್ಯಾಸ ಪಡೆದ ಪುರುಷರ ಸಂಖ್ಯೆ ಶೇ. 15ರಷ್ಟು ಮಾತ್ರ. ಹೀಗೆ ಹೆಚ್ಚಿನ ಮಹಿಳಾ ಸದಸ್ಯರು ಅನುಭವವಿಲ್ಲದವರಾದರೂ ವಿದ್ಯಾಭ್ಯಾಸದಲ್ಲಿ ಮುಂದಿದ್ದವರು. ಆದರೆ ಶೇ. 90ರಷ್ಟು ಮೊದಲ ಬಾರಿಗೆ ಚುನಾಯಿತರಾದವರು ಎಂದರೂ ಇವರಲ್ಲಿ ಶೇ. 50ರಷ್ಟು ವಿವಿಧ ಸಾಮಾಜಿಕ ಸಂಘಟನೆಗಳಲ್ಲಿ ಕೆಲಸ ಮಾಡಿದ ಅನುಭವವಿದ್ದವರು. ಇದನ್ನೂ ಕರ್ನಾಟಕದ ಪರಿಸ್ಥಿತಿಗೆ ನೀವೇ ಹೋಲಿಸಿ ನೋಡಿ.

**ಜನರೂಪಿತ ಯೋಜನೆ:**

ಈಗಾಗಲೇ ವಿವರಿಸಿದಂತೆ ಜನರೂಪಿತ ಯೋಜನೆ ಹೊಸ ಅಭಿವೃದ್ಧಿ ಸಂಸ್ಕೃತಿಯನ್ನೇ ಸೃಷ್ಟಿಸುವ ಉದ್ದೇಶದಿಂದ ರೂಪಿತವಾಯಿತು. ಕರ್ನಾಟಕ ಮತ್ತಿತರ ರಾಜ್ಯಗಳು ವಿಕೇಂದ್ರಿಕೃತ ಪಂಚಾಯತ್ ರಾಜ್ಯ ವ್ಯವಸ್ಥೆ, ಅವುಗಳಿಗೆ ಹಣ ನೀಡಿಕೆ, ಅಭಿವೃದ್ಧಿ ಯೋಜನೆಗಳ ವರ್ಗಾವಣೆ ಅತ್ಯಂತ ಯಶಸ್ವಿಯಾಗಿ ಮಾಡಿದ್ದೇವೆ ಎಂದು ಘೋಷಿಸಿಕೊಳ್ಳುತ್ತವೆ. ಆದರೆ ಅದೇ ಮಾತುಗಳು ಕೇರಳ, ಪ. ಬಂಗಾಳದಂತಹ ವಾಮಪಂಥೀಯ ಸರ್ಕಾರಗಳ ಸಂದರ್ಭದಲ್ಲಿ ಕೇವಲ ಘೋಷಣೆಗಳಾಗದೆ ಸಾಮಾಜಿಕ ಚಳುವಳಿಗಳಾಗುತ್ತವೆ.

ಇದ್ದಕ್ಕಿದ್ದಂತೆ ಒಂದು ಹಳ್ಳಿಯ ಮಗ್ಗುಲಿಗೆ ಕಲ್ಲುಗಳ ರಾಶಿ ಬಂದು ಬೀಳಲಾರಂಭಿಸುತ್ತದೆ. ಆಗ ಎಲ್ಲರೂ ಇದು ಯಾಕೆ ಇಲ್ಲಿಗೆ ಬಂತು ಎಂದು ಏನೇನೋ ಊಹೆ ಮಾಡಿಕೊಳ್ಳಲಾರಂಭಿಸುತ್ತಾರೆ. ಆಗ ಯಾರೋ ದಿನನಿತ್ಯ ತಾಲ್ಲೂಕು ಕೇಂದ್ರಕ್ಕೆ ಅಥವಾ ಶಾಸಕರ ಮನೆಗೆ ಎಡತಾಕುವನೊಬ್ಬ ಇದು ಊರಿನಲ್ಲಿ ಸಮುದಾಯ ಭವನ ಕಟ್ಟಿಸುವುದಕ್ಕೆ ಎನ್ನುತ್ತಾರೆ. ಊರಿನ ಜನ "ಶಾಲೆ ಬೀಳುವಂತಿದೆ ಅದನ್ನು ಮೊದಲು ಕಟ್ಟಿಸಿರಿ ಎಂದರೆ ಸಮುದಾಯ ಭವನವಂತೆ. ಈಗ ಯಾರಿಗೆ ಬೇಕಾಗಿತ್ತು ಅದು" ಎಂದು ಮೂಗು ಮುರಿಯುತ್ತಾ ಹೋಗುತ್ತಾರೆ. ಸಾಮಾನ್ಯವಾಗಿ ಇದು ನಮ್ಮ ಹಳ್ಳಿಗಳಲ್ಲಿ ಯೋಜನೆ ಕಾರ್ಯಗತವಾಗುವ ಪರಿ. ಆದರೆ ಜನರೂಪಿತ ಯೋಜನೆ ಅದರ ಹೆಸರೇ ತಿಳಿಸುವಂತೆ ಜನರೇ ರೂಪಿಸುವ ಯೋಜನೆ. ದಿಲ್ಲಿಯಲ್ಲಿ ಅಥವಾ ಬೆಂಗಳೂರಿನಲ್ಲಿ ಕುಳಿತು ಅಧಿಕಾರಿಗಳ ಗುಂಪು ಸೃಷ್ಟಿಸಿದ ಯೋಜನೆಯಲ್ಲ. ಹಳ್ಳಿಗಳ ವಾಸ್ತವ ಪರಿಸ್ಥಿತಿ, ಅವರ ನೈಜ್ಯ ಸಮಸ್ಯೆಗಳು, ಚಿಂತನೆ, ಮನೋಬಾವ ಯಾವುದನ್ನೂ ಅರಿಯದ, ಆದರೆ ತಮ್ಮನ್ನು ತಾವೇ ಸರ್ವಜ್ಞರೆಂದು ಕೊಂಡ ಐ.ಎ.ಎಸ್. ಅಧಿಕಾರಿಗಳು ರೂಪಿಸಿದ ಯೋಜನೆಯಲ್ಲ.

ಕೇರಳದಲ್ಲಿ ಪ್ರತಿಗ್ರಾಮದಲ್ಲಿ ಪ್ರತಿ ವಾರ್ಡಿನಲ್ಲಿಯೂ ಅಲ್ಲಿಯ ಜನರನ್ನು ಸೇರಿಸಿ ಅವರಿಗೆ ಅವಶ್ಯವಿರುವ ಅಭಿವೃದ್ಧಿ ಕಾರ್ಯಗಳು, ಯೋಜನೆಗಳು ಯಾವುವು? ಅದರಲ್ಲಿ ಅತಿ ತುರ್ತಾಗಿ ಆಗಬೇಕಾದ್ದು ಯಾವುದು? ಎಂದು ಚರ್ಚಿಸಿ ಆಗಬೇಕಾದ ಎಲ್ಲ ಕೆಲಸಗಳ ಪಟ್ಟಿಯನ್ನು ತಯಾರಿಸುತ್ತಾರೆ. ಹಾಗೆಯೇ ಊರಿನ ಹರಿಜನರಿಗೆ, ಗಿರಿಜನರಿಗೆ ಅವಶ್ಯವಿರುವ ಅಭಿವೃದ್ಧಿ ಕಾರ್ಯಗಳ ಬಗೆಗೂ ಕೂಡ. ಜೊತೆಗೆ ಊರಿನ ಪ್ರಾಕೃತಿಕ ಮಾನವ ಸಂಪತ್ತಿನ ಬಗೆಗಿನ ಸಮೀಕ್ಷೆ, ಅವುಗಳ ಉಪಯೋಗ ಮಾಡಿ ಜೀವನ ಮಟ್ಟವನ್ನು ಅಭಿವೃದ್ಧಿ ಮಾಡಿಕೊಳ್ಳುವ ರೀತಿ, ಆ ಊರಿನ ಸಂಕ್ಷಿಪ್ತ ಚರಿತ್ರೆ ಇವೆಲ್ಲವುಗಳನ್ನು ಒಳಗೊಂಡ ಗ್ರಾಮ ಮಟ್ಟದ ವರದಿಯನ್ನು ತಯಾರಿಸುತ್ತಾರೆ. ಈ ಹಂತದಲ್ಲಿ 30 ಲಕ್ಷ ಮಂದಿ ಭಾಗವಹಿಸಿ ಪ್ರತಿಗ್ರಾಮಕ್ಕೂ 80 ರಿಂದ 100 ಪುಟಗಳ ಒಂದು ವರದಿಯನ್ನು ತಯಾರಿಸಿದರು. ನಂತರ ಗ್ರಾಮ ಮಟ್ಟದ, ತಾಲ್ಲೂಕು ಮಟ್ಟದ, ಜಿಲ್ಲಾ ಮಟ್ಟದ ಸಮಿತಿಗಳು ಆಗಬೇಕಾದ ಒಂದೊಂದು ಅಭಿವೃದ್ಧಿ ಕಾರ್ಯಕ್ಕೂ, ಒಂದೊಂದು ಯೋಜನೆಯನ್ನು ವಿವಿಧ ವಿಷಯಗಳ ಯೋಜನಾ ಸಮಿತಿಯ ಮೂಲಕ ತಯಾರಿಸುತ್ತವೆ. ಇವುಗಳಲ್ಲಿ ಚುನಾಯಿತ ಪ್ರತಿನಿಧಿ ಅಧ್ಯಕ್ಷರಾಗಿ, ಸಂಬಂಧಪಟ್ಟ ಇಲಾಖೆಯವರು ಕಾರ್ಯದರ್ಶಿಯಾಗಿದ್ದರೂ ಗ್ರಾಮದಲ್ಲಿ ಈ ವಿಷಯದ ಬಗ್ಗೆ ಮಾಹಿತಿ ಇದ್ದವರು, ಅಲ್ಲಿರುವ ಈ ವಿಷಯದಲ್ಲಿ ಶಿಕ್ಷಣ ಪಡೆದು ಅಥವಾ ಅನುಭವ ಪಡೆದ, ನಿವೃತ್ತಿ ಪಡೆದ ಉದ್ಯೋಗಿಗಳು ಇವರೆಲ್ಲಾ ಅದರ ಸದಸ್ಯರರಾಗಬಹುದು. ಇವರೆಲ್ಲರಿಗೂ ಯೋಜನೆಗಳನ್ನು ರೂಪಿಸಲೂ ಸಾಧ್ಯವಾಗುವಂತೆ ಅಬಿವೃದ್ಧಿ ವಿಚಾರ ಸಂಕಿರಣಗಳ ಮೂಲಕ ತರಬೇತಿ ನೀಡಲಾಗಿದೆ. ಎಲ್ಲ 14,173 ಚುನಾಯಿತರೂ ಸೇರಿ ಈ ಹಂತದಲ್ಲಿ 3 ಲಕ್ಷಕ್ಕೂ ಹೆಚ್ಚು ಜನ

ಭಾಗವಹಿಸಿದ್ದಾರೆ. ಈ ಹಂತದಲ್ಲಿ ಒಂದು ಲಕ್ಷಕ್ಕೂ ಹೆಚ್ಚು ಯೋಜನೆಗಳನ್ನೂ ರೂಪಿಸಲಾಗಿದೆ. ಹೀಗೆ ಈ ಯೋಜನೆಗಳ ಪರಿಶೀಲನೆ, ಅದಕ್ಕೆ ಹಣಕಾಸು ಹೊಂದಿಸಿಕೊಳ್ಳುವುದು, ಇತ್ಯಾದಿ ಹಲವಾರು ಹಂತಗಳಲ್ಲಿ ಮತ್ತಷ್ಟು ಹೆಚ್ಚು ಜನ ತಜ್ಞರು, ಉಪನ್ಯಾಸಕರೂ, ಪ್ರಾಧ್ಯಾಪಕರು ಆಯಾ ಪ್ರದೇಶದ ವೈದ್ಯರು, ಇಂಜನಿಯರ್‌ಗಳು ಇವರ ಜೊತೆಯಲ್ಲಿ ಈ ಕೆಲಸದಲ್ಲಿ ಒಳ್ಳೆಯ ಅನುಭವವಿರುವ ಕೂಲಿಕಾರರೂ ಸೇರಿ ಯೋಜನೆಗಳನ್ನು ರೂಪಿಸಿದ್ದಾರೆ. ಜಾರಿಗೊಳಿಸಿದ್ದಾರೆ.

**ಜನರೂಪಿತ ಯೋಜನೆಯಲ್ಲಿ ಮಹಿಳೆಯರು:**

ಇಷ್ಟು ದೊಡ್ಡ ಪ್ರಮಾಣದಲ್ಲಿ ಸಾಮಾನ್ಯ ಜನ ಭಾಗವಹಿಸಿದ ಯೋಜನೆಗಳ ತಯಾರಿಕೆಯಲ್ಲಿ ಮಹಿಳೆಯರೂ ಪಾತ್ರ ವಹಿಸಿದ್ದಾರೆ. ವಾರ್ಡ್ ಮಟ್ಟ, ಗ್ರಾಮ ಮಟ್ಟದ ಸಭೆಗಳಲ್ಲಿ ಶೇ. 24.82ರಷ್ಟು ಜನ ಮಹಿಳೆಯರು ಅಂದರೆ ಏಳು ಲಕ್ಷಕ್ಕಿಂತಲೂ ಹೆಚ್ಚು ಜನ ಮಹಿಳೆಯರು ಭಾಗವಹಿಸಿದ್ದಾರೆ. ತಮ್ಮ ವಾರ್ಡಿನ, ಗ್ರಾಮದ ಸಮಸ್ಯೆಗಳು, ಸಂಪನ್ಮೂಲಗಳು ಇವುಗಳ ಸಮೀಕ್ಷೆ ನಡೆಸಿ ಅನುಭವ ಪಡೆದಿದ್ದಾರೆ. ಇಡೀ ಊರಿನ ಬಗೆಗೆ, ವಿವಿಧ ಇಲಾಖೆಗಳ ಬಗ್ಗೆ ಅವುಗಳ ಯೋಜನೆಗಳ ಬಗ್ಗೆ ತಿಳುವಳಿಕೆ ಪಡೆಯಲಾರಂಭಿಸಿದ್ದಾರೆ. ಚುನಾಯಿತ ಪ್ರತಿನಿಧಿಗಳಂತೂ ವಿವಿಧ ವಿಷಯಗಳ ಯೋಜನೆಗಳನ್ನು ರೂಪಿಸುವ ಸಮಿತಿಗಳಲ್ಲಿ ಭಾಗವಹಿಸಿದ್ದಾರೆ. ಯೋಜನೆಗಳನ್ನು ರೂಪಿಸುವ ಅನುಭವದಲ್ಲಿ ಭಾಗಿಯಾಗಿದ್ದಾರೆ. ಇದರ ಜೊತೆಗೆ ಅಭಿವೃದ್ಧಿ ವಿಚಾರಸಂಕಿರಣಗಳು, ಕಾರ್ಯಾಗಾರಗಳು ವಿವಿಧ ಮಟ್ಟದ ತರಬೇತಿಗಳು ಇವೆಲ್ಲದರಲ್ಲಿಯೂ ಭಾಗವಹಿಸಿದ ಎಲ್ಲರಿಗೂ ಅಭಿವೃದ್ಧಿ ಮತ್ತು ಮಹಿಳಾಪರ ದೃಷ್ಟಿಕೋನ ಎಂಬ ಬಗ್ಗೆ ವಿಶೇಷ ಉಪನ್ಯಾಸ ತರಬೇತಿಗಳನ್ನು ನೀಡಲಾಗಿದೆ. ಪ್ರತಿಯೋಜನೆ, ಕೆಲಸದ ರೂಪುರೇಷೆಗಳನ್ನು ನಿರ್ಧರಿಸುವಾಗಲೂ ಆ ಯೋಜನೆಯನ್ನು ಮಹಿಳಾಪರ ದೃಷ್ಟಿಯಿಂದ ಮೌಲ್ಯಮಾಪನ ಮಾಡಿದ ಬಗ್ಗೆ ವಿಶೇಷ ಭಾಗವೊಂದನ್ನು (Gender impact) (ಇಂದು ಯಾವುದೇ ಅಭಿವೃದ್ಧಿ ಯೋಜನೆಯನ್ನು ರೂಪಿಸುವಾಗ ಪರಿಸರ ದೃಷ್ಟಿಯಿಂದ ಮೌಲ್ಯಮಾಪನ ಮಾಡುವುದು ಅನಿವಾರ್ಯವೆಂದು ನಿಯಮಗಳನ್ನು ರೂಪಿಸಿರುವಂತೆ) ಆ ಯೋಜನೆಯ ವರದಿಗಳಲ್ಲಿ ಸೇರಿಸಿರಲೇಬೇಕೆಂದು ಮಾರ್ಗದರ್ಶಿ ಸೂಚನೆಗಳನ್ನು ನೀಡಲಾಗಿದೆ. ಜೊತೆಗೆ ಪ್ರತಿ ಪಂಚಾಯ್ತಿ, ಪುರಸಭೆಯಲ್ಲಿಯೂ ಮಹಿಳೆಯರದೇ ಆದ ಸಮಸ್ಯೆಗಳ ಪರಿಹಾರಕ್ಕೆ ಅಗತ್ಯವಾದ ಅಭಿವೃದ್ಧಿ ಕಾರ್ಯಗಳನ್ನು ರೂಪಿಸುವುದಕ್ಕಾಗಿ ಶೇ. 10ರಷ್ಟು ಹಣವನ್ನು ಮೀಸಲಾಗಿಡಲಾಗಿದೆ. ಈ ಯೋಜನೆಯ ಫಲಾನುಭವಿಗಳಾದ ಮಹಿಳೆಯರದೇ ಆದ ಫಲಾನುಭವಿ ಸಮಿತಿಯೊಂದು ಆಯಾ ಪ್ರದೇಶದಲ್ಲಿ ಈ ಯೋಜನೆಯನ್ನು ಜಾರಿಗೆ ತರುತ್ತದೆ. ಈ ಮೂಲಕ ಮಹಿಳೆಯರು ಯೋಜನೆಗಳನ್ನು ರೂಪಿಸುವುದರಲ್ಲಿ ಭಾಗವಹಿಸುವ ಅವಕಾಶಗಳನ್ನು ಹಾಗೂ ಅನಿವಾರ್ಯತೆಯನ್ನು ಸೃಷ್ಟಿಸಲಾಗಿದೆ.

**ಮಹಿಳಾ ಸದಸ್ಯರ ಬೆಳವಣಿಗೆ:**

ಈ ಎಲ್ಲಾ ಹಂತದ ಪ್ರಕ್ರಿಯೆಗಳಲ್ಲಿ ಪಾಲುಗೊಂಡ ಮಹಿಳಾ ಸದಸ್ಯರಿಗೆ ಚುನಾಯಿತ ಪ್ರತಿನಿಧಿಯಾಗಿ ಕೆಲಸಮಾಡಲು ಬೇಕಾದ ಅನುಭವ, ತಾವೇ ಯೋಜನೆಯನ್ನು ರೂಪಿಸುವ ಹೆಮ್ಮೆಯ ಪಾತ್ರ ಲಭ್ಯವಾಗಿದೆ. ಈ ಒಂದು ವರ್ಷದ ಕೊನೆಯಲ್ಲಿ ಕೇರಳದ ಮಹಿಳಾ ಸದಸ್ಯರನ್ನು ಅವರ ಅನುಭವದ ಬಗ್ಗೆ ಪ್ರಶ್ನಿಸಿದಾಗ ಅವರು ತಮಗೆ ಅಧಿಕಾರಿಗಳನ್ನು ನಿಯಂತ್ರಿಸುವುದು ಹಾಗೂ ಅವರ ಮೂಲಕ ಕೆಲಸ ಪಡೆಯುವಲ್ಲಿನ ಹಾಗೂ ಸಭೆಗಳಲ್ಲಿ ಮಾತನಾಡುವ ಭಾಷಣ ಮಾಡುವ ಸಾಮರ್ಥ್ಯ ಹೆಚ್ಚಾಗಿದೆಯೆಂದು ಉತ್ತರ ನೀಡಿದ್ದಾರೆ. ಈ ಯೋಜನೆಯಲ್ಲಿ ಭಾಗವಹಿಸುವುದಕ್ಕೆ ಮೊದಲಿನ ತಮ್ಮ ಪರಿಸ್ಥಿತಿಗೆ ಹೋಲಿಸಿದರೆ ತಮ್ಮಲ್ಲಿ ಶೇ. 40ರಷ್ಟು ಬೆಳವಣಿಗೆಯಾಗಿದೆಯೆಂದು ಈ ಸಮೀಕ್ಷೆಯಲ್ಲಿ ತಿಳಿಸಿದ್ದಾರೆ. ಹೀಗೆ ಕೇರಳದ ಪ್ರತಿಯೊಬ್ಬ ಮಹಿಳಾ ಪ್ರತಿನಿಧಿಯೂ ತಮ್ಮ ಚುನಾಯಿತ ಅವಧಿಯಾದ ಐದು ವರ್ಷಗಳಲ್ಲಿ ಐದು ವಾರ್ಷಿಕ ಯೋಜನೆಗಳನ್ನು ರೂಪಿಸುವುದರಲ್ಲಿ ಭಾಗವಹಿಸುವ ಮೂಲಕ ವಿವಿಧ ವಿಷಯಗಳ ಬಗ್ಗೆ, ಆಡಳಿತಾತ್ಮಕ ನೀತಿ ನಿಯಮಗಳ ಬಗ್ಗೆ ಉತ್ತಮ ಜ್ಞಾನ ಪಡೆಯುವ ಅವಕಾಶವನ್ನು ಪಡೆದಿದ್ದಾಳೆ. ಹೀಗಾಗಿ ಕೇರಳದಲ್ಲಿ ಮಹಿಳಾ ಪಂಚಾಯತಿ ಸದಸ್ಯರಿಗೆ ಬದಲಾಗಿ ಅವರ ಗಂಡಂದಿರು ಆ ಸ್ಥಾನವನ್ನು ಆಕ್ರಮಿಸುವ, ಪಂಚಾಯ್ತಿ ಸಭೆ, ಅದರ ಕಛೇರಿಗಳಿಗೆ ಬಂದು ಸದಸ್ಯರ ಪಕ್ಕದಲ್ಲಿ ಕುಳಿತು ಅವರ ಬದಲಾಗಿ ಕೆಲಸ ಮಾಡುವ ಒಂದೇ ಒಂದು ಸಾಧ್ಯತೆಯೂ ಇಲ್ಲ. ಅದರ ಫಲವಾಗಿ ಮಹಿಳಾ ಪ್ರತಿನಿಧಿ ಸ್ವಸಾಮರ್ಥ್ಯದಿಂದ ಕೆಲಸ ಮಾಡುವ, ಆ ಮೂಲಕ ಸಮಾಜಕ್ಕೆ ಕಾಣಿಕೆ ಸಲ್ಲಿಸುವ ಪ್ರಯತ್ನ ನಡೆಸಿದ್ದಾಳೆ.

**ಪ್ರತಿ ಸದಸ್ಯರೂ ಪೂರ್ಣಾವಧಿ ಕೆಲಸಗಾರರು:**

ಇದರೊಂದಿಗೆ ಕೇರಳದ ಪಂಚಾಯತ್ ವ್ಯವಸ್ಥೆಯಲ್ಲಿ ಗಮನಿಸಬೇಕಾದ ಮತ್ತೊಂದು ವೈಶಿಷ್ಟ್ಯವೆಂದರೆ ಪ್ರತಿ ಪಂಚಾಯತ್ ಸದಸ್ಯನೂ/ಳೂ ಗ್ರಾಮಾಭಿವೃದ್ಧಿಯ ಪೂರ್ಣಾವಧಿ ಹೊಣೆಹೊತ್ತ ಕಾರ್ಯಕರ್ತರಾಗಿರುವುದು ಹಾಗೂ ಪ್ರತಿ ಪಂಚಾಯತ್ ಸದಸ್ಯರಿಗೆ ವೇತನವನ್ನು ನೀಡುವುದು.

ಅವರ ವೇತನಗಳು ಈ ರೀತಿ ಇವೆ.

| | ಗ್ರಾಮ | ತಾಲ್ಲೂಕು | ಜಿಲ್ಲಾ |
|---|---|---|---|
| ಪಂಚಾಯತ್ ಸದಸ್ಯ/ಸ್ಯೆ | 1.000 | 1.250 | 1.750 |
| ಉಪ ಸಮಿತಿಗಳ ಅಧ್ಯಕ್ಷ/ಅಧ್ಯಕ್ಷೆ | 1.500 | 1.750 | 2.000 |
| ಗ್ರಾಮಪಂಚಾಯತ್ ಉಪಾಧ್ಯಕ್ಷ/ಕ್ಷೆ | 2.500 | 3.000 | 3.500 |
| ಗ್ರಾಮಪಂಚಾಯತ್ ಅಧ್ಯಕ್ಷ/ಕ್ಷೆ | 3.500 | 4.000 | 4.500 |

ನಮ್ಮ ರಾಜ್ಯದಲ್ಲಿರುವಂತೆ ಎಲ್ಲಾ ಹಂತದ ಸದಸ್ಯರಿಗೆ ಅಧ್ಯಕ್ಷ, ಉಪಾಧ್ಯಕ್ಷರಿಗೆ, ಕೇವಲ ಸಭಾ ಶುಲ್ಕ (ಸಿಟ್ಟಿಂಗ್ ಫೀಸ್) ಜಿಲ್ಲಾ ಪಂಚಾಯತ್ ಅದ್ಯಕ್ಷರಿಗೆ ಮಾತ್ರ ರಾಜ್ಯ ಮಂತ್ರಿ ಸ್ಥಾನದ ಗೌರವ ಹಾಗೂ ವೇತನ ಎಂಬ ಭೇದವಿಲ್ಲ.

**ಭ್ರಷ್ಟಾಚಾರ ನಿಯಂತ್ರಣ:**

ಕರ್ನಾಟಕದಲ್ಲಿ ಅಧಿಕಾರ ವಿಕೇಂದ್ರಿಕರಣವನ್ನು ಹಲವು ಜನ ಭ್ರಷ್ಟತೆಯ ವಿಕೇಂದ್ರಿಕರಣವೆಂದು ಜರೆಯುತ್ತಾರೆ. ಈ ಭ್ರಷ್ಟತೆಯಲ್ಲಿ ಮಹಿಳಾ ಸದಸ್ಯರೂ-ಪುರುಷರಿಗಿಂತ ಮುಂದೆ ಸಾಗಿಲ್ಲವಾದರೂ ಅನೇಕ ಕಡೆ ಅವರಿಗೆ ಸ್ಪರ್ಧೆ ನೀಡುತ್ತಿದ್ದಾರೆ ಎಂಬುದಕ್ಕೆ ಹಲವು ಉದಾಹರಣೆಗಳನ್ನು ನೀಡುತ್ತಾರೆ. ಕೇರಳದಲ್ಲಿ ಈ ಭ್ರಷ್ಟತೆಯ ನಿಯಂತ್ರಣ ಹೇಗೆ ಎಂಬ ಪ್ರಶ್ನೆ ಏಳುತ್ತದೆ. ಕೇರಳದಲ್ಲಿ ಪಂಚಾಯತ್ ಕಾರ್ಯಗಳ ಪೂರ್ಣ ಪಾರದರ್ಶಕತೆಯ ಮೂಲಕ, ಜನರನ್ನು ಪ್ರತಿಹಂತದಲ್ಲಿ ಭಾಗೀದಾರರನ್ನಾಗಿ ಮಾಡಿಕೊಳ್ಳುವ ಮೂಲಕ ಭ್ರಷ್ಟತೆಯ ನಿಯಂತ್ರಣ ಸಾಧ್ಯವಾಗಿದೆ. ಯಾವುದೇ ಯೋಜನೆಯ ಫಲಾನುಭವಿಗಳನ್ನು ಒಂದು ಸಮಿತಿಯಾಗಿ ರಚಿಸಿ ಅವರ ಮೂಲಕವೇ ಆಯ್ಕೆ, ಜಾರಿ ಮೊದಲಾದುವುಗಳನ್ನು ಮಾಡುವುದು. ಹಾಗೆಯೇ ಫಲಾನುಭವಿಗಳ ಆಯ್ಕೆ ಪಟ್ಟಿಯನ್ನು ಹಾಗೂ ವಿವಿಧ ಕೆಲಸಗಳ ವೆಚ್ಚದ ಅಂದಾಜು ಪಟ್ಟಿ, ವೇಳಾಪಟ್ಟಿಯನ್ನು ಪಂಚಾಯತ್ ನೋಟೀಸ್ ಬೋರ್ಡಿನಲ್ಲಿ ಯೋಜನೆಯನ್ನು ಜಾರಿ ಮಾಡುವುದಕ್ಕೆ ಹಲವು ವಾರಗಳ ಮೊದಲೇ ಪ್ರಕಟಿಸಬೇಕು. ಪತ್ರಿಕೆಗಳ ಮೂಲಕ ಹಲವು ವಿವರಗಳು ಜನರಿಗೆ ಸಿಗುವಂತಾಗಬೇಕು ಎಂಬ ನಿಯಮಗಳ ಮೂಲಕ ಜನರನ್ನೇ ಭ್ರಷ್ಟಾಚಾರ ನಿಯಂತ್ರಣ ಮಾಡುವ ಕಾವಲು ಪಡೆಯುವಂತೆ ಕೆಲಸ ಮಾಡುವ ಅವಕಾಶ ನೀಡಲಾಗಿದೆ.

**ಮಹಿಳಾ ಸಮುದಾಯಕ್ಕೆ ತರಬೇತಿ:**

ಹೀಗೆ ಯೋಜನೆಗಳನ್ನು ರೂಪಿಸುವ ವಿವಿಧ ಹಂತಗಳಲ್ಲಿ ಚುನಾಯಿತ ಪ್ರತಿನಿಧಿಗಳನ್ನು ಜನಸಮುದಾಯಕ್ಕೆ ಹೊಣೆಗಾರರನ್ನಾಗಿ ಮಾಡಿ ಅವರ ಚಟುವಟಿಕೆಗಳ ಮೇಲೆ ಕಣ್ಣಿರಿಸುವಂತೆ ಮಾಡುವ ಮೂಲಕ ಇಡೀ ಸಮಾಜಕ್ಕೆ, ಮಹಿಳಾ ಸಮುದಾಯಕ್ಕೆ ಆಡಳಿತ ವಿಷಯ ತರಬೇತಿ ಚುನಾವಣೆಗೆ ನಿಲ್ಲುವ ಮೊದಲೇ ಸಿಗುವಂತಾಗಿದೆ. ಲಕ್ಷಗಟ್ಟಳೆ ಮಹಿಳೆಯರಿಗೆ ಸಿಕ್ಕ ವಿವಿಧ ಯೋಜನೆ ರೂಪಿಸುವ ಅನುಭವ ಚುನಾವಣೆಗಳ ಸ್ಪರ್ಧೆಗಳ ತಿಳುವಳಿಕೆ, ಅನುಭವ ಮಟ್ಟವನ್ನು ಎತ್ತರಿಸಲು ಆ ಮೂಲಕ ಮುಂದಿನ ಚುನಾವಣೆಗಳಲ್ಲಿಯೂ ಉತ್ತಮ ಮಹಿಳಾ ಪ್ರತಿನಿಧಿಗಳ ಆಯ್ಕೆಯಾಗಲು ಅವಕಾಶ ಕಲ್ಪಿಸಿದೆ.

ಕೇರಳ ರಾಜ್ಯದ ಮಹಿಳಾ ಚುನಾಯಿತ ಪ್ರತಿನಿಧಿಗಳು ಹಾಗೂ ಒಟ್ಟಾರೆ ಮಹಿಳಾ ಸಮುದಾಯ ಹೆಚ್ಚು ತಿಳುವಳಿಕೆ, ಸಾಮರ್ಥ್ಯದಿಂದ ಕೆಲಸ ಮಾಡುವ ಅವಕಾಶ ಲಭ್ಯವಾಗಿದೆ. ಅದನ್ನು ಹಲವರು ಉಪಯೋಗಿಸಿಕೊಂಡು ವ್ಯಕ್ತಿತ್ವದ ಬೆಳವಣಿಗೆಯನ್ನು ಸಾಧಿಸಿದ್ದಾರೆ ನಿಜ. ಆದರೆ ಅಲ್ಲಿ ಮಹಿಳೆಯರಿಗೆ ಸಮಸ್ಯೆಯೇ ಇಲ್ಲ, ಎಲ್ಲರೂ ಪುರುಷರಿಗೆ ಸಮಾನ ರೀತಿಯಲ್ಲಿ ಕೆಲಸ ಮಾಡುತ್ತಿದ್ದಾರೆ ಎಂದು ಭಾವಿಸಬಾರದು. ಎಂಬ ಎಚ್ಚರಿಕೆಯನ್ನು ನೀಡಬಯಸುತ್ತೇನೆ. ಗ್ರಾಮಮಟ್ಟದಲ್ಲಿ ಮಹಿಳೆಯ ಪಾತ್ರ ಹೆಚ್ಚಿದ್ದರೂ ಮೇಲಿನ ಮಟ್ಟಗಳಲ್ಲಿ ಹಾಗೂ ಪರಿಣಿತರು, ತಜ್ಞರು ಅವಶ್ಯವಾದೆಡೆ ಅವರ ಪಾತ್ರ ಇನ್ನೂ ಕಡಿಮೆಯೆ. ಅದನ್ನು ಸುಧಾರಿಸಲು ಜನರೂಪಿತ ಯೋಜನೆಯ ಎರಡನೆಯ ವರ್ಷದಲ್ಲಿ ತೀವ್ರ ಪ್ರಯತ್ನ ಆರಂಭವಾಗಿದೆ.

# ಕೆಂಡದ ಕಾವು ಕೆಂಡ ತುಳಿದವನಿಗಷ್ಟೇ ಗೊತ್ತು....

*ಪಿ. ಸಾಯಿನಾಥ್*

ಭಾರತದಂತಹ ಶ್ರೇಣೀಕೃತ ಸಮಾಜದಲ್ಲಿ 'ಬಡ' - 'ದಲಿತ ಜನಾಂಗಕ್ಕೆ ಸೇರಿದ' - 'ಗ್ರಾಮೀಣ ಪ್ರದೇಶದ' - 'ಹೆಣ್ಣು ಮಕ್ಕಳು' ಅಧಿಕಾರದ ಸೂತ್ರ ಹಿಡಿಯುವುದೆಂದರೆ ಅದೊಂದು ಕ್ರಾಂತಿಕಾರಿ ಘಟನೆಯೆಂದೇ ಹೇಳಬೇಕು. ನಮ್ಮ ಸಮಾಜದಲ್ಲಿ ಹೆಣ್ಣಾಗಿ ಹುಟ್ಟುವುದೇ 'ಶಾಪ' ಎಂಬ ಪರಿಸ್ಥಿತಿ ಇನ್ನೂ ಇರುವಾಗ ಅದರ ಜೊತೆಗೆ 'ಬಡತನ, ದಲಿತ ಜನಾಂಗ ಹಾಗೂ ಗ್ರಾಮೀಣ ಪ್ರದೇಶ'ಗಳೆಂಬ ಸಾಮಾಜಿಕ ಸ್ಥಿತಿಗಳೂ ಅಂಟಿಕೊಂಡಿದ್ದರೆ ಅಂತಹವರ ಬದುಕು ಎಷ್ಟೊಂದು ಕಷ್ಟಕರ ಎಂದು ಬಣ್ಣಿಸಲಾಗುವುದಿಲ್ಲ.

ಹೆಣ್ಣೆಂಬ ಕಾರಣಕ್ಕೆ ತನ್ನ ಕುಟುಂಬದಲ್ಲೇ ಅವಹೇಳನ; ಬಡವರೆಂಬ ಕಾರಣಕ್ಕೆ ಸಿರಿವಂತರಿಂದ ಮೂದಲಿಕೆ, ದಲಿತರೆಂಬ ಕಾರಣಕ್ಕೆ ಬೇರೆ ಜಾತಿಯವರಿಂದ ಹಿಂಸೆ, ಹಳ್ಳಿಯವರೆಂಬ ಕಾರಣಕ್ಕೆ ನಗರಕೇಂದ್ರಿತ ಸಮಾಜದಿಂದ ಮೂದಲಿಕೆ. ಇಂತಹ ಸ್ಥಿತಿಯ ಕಷ್ಟ ಏನು ಎನ್ನುವುದು ಅನುಭವಿಸಿದವರಿಗೆ ಮಾತ್ರ ಗೊತ್ತು. ಹಿರಿಯ ಕವಿ ಸುಬ್ಬಣ್ಣ ರಂಗನಾಥ ಎಕ್ಕುಂಡಿ ಅವರು ಹೇಳಿದಂತೆ "ಕೆಂಡದ ಕಾವು ಎಷ್ಟಿದೆ ಎನ್ನುವುದು ಕೆಂಡ ತುಳಿದವನಿಗೆ ಮಾತ್ರ ಗೊತ್ತಾಗುತ್ತದೆ".

ಆದರೂ, ಇಂತಹ ನೆಲದಿಂದಲೂ ಅಸಾಧಾರಣ ಸಾಮರ್ಥ್ಯದ ಮಹಿಳೆಯರು ಎದ್ದು ಬಂದಿದ್ದಾರೆ. 'ಮೀಸಲಾತಿ' ಎಂಬ ಸಾಮಾಜಿಕ ನ್ಯಾಯದ ದಂಡ ಇಂತಹ ಅನೇಕ ಮಹಿಳೆಯರಿಗೆ ಮುನ್ನುಗ್ಗುವ ದಾರಿ ತೋರಿಸಿದೆ. ಜಡಗಟ್ಟಿದ್ದ ಸಮಾಜದಲ್ಲಿ ಬೆಳಕಿನ ಮಿಂಚು ಹರಿಸಿದೆ. "ಪ್ರಾಕ್ಸಿ ರಾಜಕಾರಣ, ಮೇಲ್ವರ್ಗದ ಮಹಿಳೆಯರ ಬಹುಮತ"ದಂತಹ ಪ್ರಕರಣಗಳ ನಡುವೆಯೂ ಏಕಾಂಗಿಯಾಗಿ ಹೋರಾಡಿ ಸಮಾಜ ಬದಲಾವಣೆಗೆ ನಾಂದಿ ಹಾಡಿದಂತಹ ಮಹಿಳೆಯರಿದ್ದಾರೆ.

ಮಧ್ಯಪ್ರದೇಶ ನಮ್ಮ ದೇಶದ ಹಿಂದುಳಿದ ರಾಜ್ಯಗಳಲ್ಲೊಂದು. ಒಂದು ಸಮಾಜದ ಹಿಂದುಳಿದಿರುವಿಕೆಗೆ ಅಲ್ಲಿನ ಮಹಿಳೆಯರ ಅನಕ್ಷರತೆ, ಬಡತನ, ಆರ್ಥಿಕ ಪರಾವಲಂಬನೆಗಳೂ ಬಹು ಮುಖ್ಯ ಕಾರಣಗಳು. ಇಂತಹ ಒಂದು ಸಮಾಜದ ಅತ್ಯಂತ ಹಿಂದುಳಿದ ಹಳ್ಳಿಗಳ ಇಬ್ಬರು ದಲಿತ ಮಹಿಳೆಯರು ಮೀಸಲಾತಿಯಿಂದಾಗಿ ದೊರಕಿದ 'ಸರ್‌ಪಂಚ್' ಸ್ಥಾನ ಹಾಗೂ ವಾಸ್ತವದಲ್ಲಿ ಇರುವ 'ನಿಕೃಷ್ಟ ಸ್ಥಾನಗಳ' ನಡುವೆ ನಡೆಸಿರುವ ಹೋರಾಟದ ಒಂದು ದೃಷ್ಟಾಂತ ಇಲ್ಲಿದೆ. ಇವು ಒಬ್ಬಿಬ್ಬರ ಕಥೆಗಳಲ್ಲ. ಭಾರತದಾದ್ಯಂತ ಹಿಂದುಳಿದ ಪ್ರದೇಶಗಳಲ್ಲಿ ಅಸಂಖ್ಯಾತ ಮಹಿಳೆಯರು 'ಮೀಸಲಾತಿ'ಯನ್ನು ಅರ್ಥಪೂರ್ಣಗೊಳಿಸಲು ನಡೆಸಿರುವ 'ನಿಶ್ಶಬ್ದ' ಹೋರಾಟದ ಒಂದೆರಡು ತುಣುಕುಗಳು ಮಾತ್ರ.

ದೃಷ್ಟಾಂತ : 1

ಗುಡಿಯಾಬಾಯಿ ಅಹಿರ್‌ವಾರ್ ಬಾಲ್‌ದಿಯೋಘರ್ ವಿಭಾಗದ ಪಿಪ್ರಾ ಗ್ರಾಮದ 'ಸರ್‌ಪಂಚ್'. ಜಾತಿಯಲ್ಲಿ ಪರಿಶಿಷ್ಟಜಾತಿಗೆ ಸೇರಿದ 'ಚಮಾರ್'. ಗ್ರಾಮದಲ್ಲಿ ಪರಿಶಿಷ್ಟ ಜಾತಿ ಮತ್ತು ಇತರ ಹಿಂದುಳಿದ ವರ್ಗಗಳ (ಯಾದವರು) ನಡುವೆ ಸದಾ ಪೈಪೋಟಿ. ಈ ಗ್ರಾಮ ಪಂಚಾಯತ್‌ನ 'ಸರ್‌ಪಂಚ್' ಆದಳು. ಯಾದವ ಜನಾಂಗಕ್ಕೆ ಸೇರಿದ ಶಂಕರ್‌ಲಾಲ್‌ಗೆ ಈಕೆಯ ಕೆಳಗೆ 'ಉಪ-ಸರ್‌ಪಂಚ್' ಆಗಿರಲು 'ನಾಚಿಕೆಯಂತೆ'. ಇದರ ಫಲ ಗುಡಿಯಾಬಾಯಿ ಕಳೆದ ಆಗಸ್ಟ್ 15ರಂದು ಹಳ್ಳಿಯ ಶಾಲೆಯ ಮುಂದೆ ರಾಷ್ಟ್ರಧ್ವಜ ಹಾರಿಸಿದ್ದಕ್ಕಾಗಿ ಹಲ್ಲೆಗೊಳಗಾಗಬೇಕಾಯಿತು. "ಹಳ್ಳಿಯ 'ಸರ್‌ಪಂಚ್' ಆಗಿ ರಾಷ್ಟ್ರಧ್ವಜ ಹಾರಿಸಬೇಕಾದ್ದು ನನ್ನ ಕರ್ತವ್ಯ. ನಾನು ಅದನ್ನೇ ಮಾಡಿದೆ. ಆದರೆ ಹಳ್ಳಿಯಲ್ಲಿ ಎಲ್ಲರೂ ನನ್ನನ್ನು ನಿಂದಿಸುತ್ತಿದ್ದಾರೆ. ಯಕಶ್ಚಿತ್ ಒಬ್ಬ 'ಚಮಾರ್' ಆಗಿ ಝಂಡಾ ಹಾರಿಸುವಷ್ಟು ಧೈರ್ಯ ಹೇಗೆ ಬಂತು ಅಂತಾರೆ" - ಎನ್ನುತ್ತಾಳೆ ಗುಡಿಯಾಬಾಯಿ.

ಝಂಡಾ ಹಾರಿಸಿ ಮನೆಗೆ ಬರುವಾಗ ಉಪ-ಸರ್‌ಪಂಚ್ ಹಾಗೂ ಆತನ ಸಹಚರರು ಆಕೆಯ ಮೇಲೆ ಹಲ್ಲೆ ನಡೆಸಿದರು. ಗುಡಿಯಾಬಾಯಿ ಗಾಯಗೊಂಡಳು. ದೈಹಿಕವಾಗಿಯಷ್ಟೇ ಅಲ್ಲ, ಮಾನಸಿಕವಾಗಿ ಕೂಡ. ಗುಡಿಯಾಬಾಯಿಯ ಗಂಡ ಪಂಚಾಯತಿಯ ಕಾರ್ಯದರ್ಶಿ. ಹೀಗಾಗಿ ಕಾರುಬಾರೆಲ್ಲ ಅವನದೇ. ಅವನು ಮಾಡಿದ ತಪ್ಪಿಗೂ ತಾನೇ ಹೊಣೆಯಾಗಬೇಕಲ್ಲ ಎಂಬ ನೋವು ಮಾತ್ರ ಗುಡಿಯಾಬಾಯಿಯದು. ಏಕೆಂದರೆ ಅವ ಎಂದೂ 'ಸರಪಂಚ'ಳನ್ನು ಸಲಹೆ ಕೇಳುವುದೇ ಇಲ್ಲ.

ಗುಡಿಯಾಬಾಯಿಗೆ ನೂರು ಕನಸುಗಳುಂಟು. "ಊರಿಗೆ ಸರಿಯಾದ ಸಂಪರ್ಕ ರಸ್ತೆಬೇಕು. ಕುಡಿಯುವ ನೀರಿನ ಸಮಸ್ಯೆಗೆ ಮೊದಲು ಪರಿಹಾರ ಹುಡುಕಬೇಕು". ಈಕೆಯ ಕನಸಿಗೆ ನೂರೆಂಟು ವಿಘ್ನಗಳು. ಉಪಸರಪಂಚ್ ರಾಜಿನಾಮೆ ಬೆದರಿಕೆ ಒಡ್ಡಿದ. ಆದರೆ ರಾಜಿನಾಮೆ ಕೊಡಲಿಲ್ಲ. ಬಲವಂತವಾಗಿ ಅಧಿಕಾರ ಕಸಿದುಕೊಳ್ಳಲು 'ಅವಿಶ್ವಾಸ ಮತ' ತರಲು ಹೆಣಗುತ್ತಿದ್ದಾನೆ. ಹಳ್ಳಿಯಲ್ಲಿ 'ಯಾದವರ' ಬಹುಸಂಖ್ಯೆ ಅವನಿಗೆ ಬೆಂಬಲವಾಗಿದೆ.

ಗಂಡನ ಅನಾದಾರ, ಯಾದವರ ಕಿರುಕುಳ, ಊರವರ ಅವಹೇಳನ ಯಾವುದೂ ಗುಡಿಯಾಬಾಯಿಯ ಸ್ಥೈರ್ಯವನ್ನು ಕುಗ್ಗಿಸಲಿಲ್ಲ. "ಮತ್ತೆ ಆಗಸ್ಟ್ 15ರಂದು ಝಂಡಾ ಹಾರಿಸುತ್ತೇನೆ. ಝಂಡಾ ಹಾರಿಸೋದು ಅಪರಾಧವೇನಲ್ಲ" ಎನ್ನುತ್ತಾಳೆ ಪೂರ್ಣ ವಿಶ್ವಾಸದಿಂದ.

ದೃಷ್ಟಾಂತ ಎರಡು:

ಕುಮ್ಮಿದೇವಿ ಅಹಿರ್‌ವಾಲ್ ಅಲ್ಲೇ ಸಮೀಪದ ಮತ್ತೊಂದು ಗ್ರಾಮ 'ಫುತೇರ್'ನ 'ಸರಪಂಚ್'. ಇವಳದು ಸ್ವಲ್ಪ ವಿಭಿನ್ನವಾದ ಸಮಸ್ಯೆ. ಕುಮ್ಮಿದೇವಿ ಪ್ರತಿನಿಧಿಸುವ 'ಚಮಾರ್'ನವರದೇ ಹಳ್ಳಿಯಲ್ಲಿ ಬಹುಸಂಖ್ಯೆಯಾದರೂ, ಹಿಂದುಳಿದ ವರ್ಗಕ್ಕೆ ಸೇರಿದ 'ಲೋಭಿ'ಗಳದೇ ಪ್ರಾಬಲ್ಯ.

ಕುಮ್ಮಿದೇವಿ ದಲಿತಳು, ಜೊತೆಗೆ ಕಡುಬಡವಳು. ಒಂದಿಷ್ಟೂ ಭೂಮಿ ಇಲ್ಲ. ಇವಳ ಗಂಡ ವಲಸೆ ಕಾರ್ಮಿಕ. ನಿತ್ಯದ ಬದುಕಿಗೆ 'ಲೋಭಿ'ಗಳನ್ನೇ ಆಶ್ರಯಿಸಬೇಕು. ಹೀಗಾಗಿ ಅವರು ಹೇಳಿದಂತೆಯೇ ಪಂಚಾಯತ್ ನಡೆಸಬೇಕು.

ಹಣ ಹಾಗೂ ಜಾತಿಯ ಪ್ರಾಬಲ್ಯಗಳು ಒಬ್ಬ 'ಸರಪಂಚ'ಳನ್ನೂ ಹೇಗೆ ಕುಬ್ಜಳನ್ನಾಗಿಸುತ್ತವೆ ಎನ್ನುವುದಕ್ಕೆ ಕುಮ್ಮಿದೇವಿ ಒಂದು ಉದಾಹರಣೆ. ವಾಸ್ತವವಾಗಿ ಪಂಚಾಯತ್ ಸಭೆ ಕರೆಯಬೇಕಾದ್ದು 'ಸರಪಂಚ್'. ಆದರೆ ಇವಳ ಸಲಹೆಯನ್ನೇ ಕೇಳದೆ 'ಲೋಭಿ' ಸದಸ್ಯರು ಸಭೆ ನಿಗಧಿಪಡಿಸುತ್ತಾರೆ. ಅದು 'ಲೋಭಿ'ಗಳು ವಾಸಿಸುವ ಬಸ್ತಿಗಳಲ್ಲಿ, ಸಂಜೆ ಕಳೆಯುವ ಹೊತ್ತಿನಲ್ಲಿ. ಹಗಲು ಹೊತ್ತಿನಲ್ಲೇ ಬಲಾಢ್ಯರ ಬಸ್ತಿಗೆ ಹೋಗಲು ಹಿಂದೆ ಮುಂದೆ ನೋಡುವ ದಲಿತ ಹೆಣ್ಣುಮಕ್ಕಳನ್ನು ಇಕ್ಕಟ್ಟಿಗೆ ಸಿಕ್ಕಿಸುವ ಪರಿ ಇದು.

ಲೋಭಿಗಳ ಇಂತಹ ಕುತಂತ್ರದಿಂದಾಗಿ ಪಂಚಾಯತ್‌ನ ಹೆಚ್ಚಿನ ನಿರ್ಣಯಗಳೆಲ್ಲ 'ಮೇಲ್ಜಾತಿಯವರ' ನಿರ್ಣಯಗಳೇ ಆಗಿರುತ್ತವೆ. ಇಷ್ಟಾದರೂ ಕುಮ್ಮಿದೇವಿ ಸಭೆಗೆ ಹೋಗುವುದನ್ನು ತಪ್ಪಿಸುವುದಿಲ್ಲ. ಆಗೀಗ ಮಾತನಾಡುವುದಕ್ಕೂ ಯತ್ನಿಸುತ್ತಾಳೆ. ಆದರೆ ಆಕೆಯ ಮಾತಿಗೆ ದನಿಗೂಡಿಸುವವರೇ ಇಲ್ಲ.

ಆದರೆ, ಬ್ಲಾಕ್ ಮೀಟಿಂಗ್‌ಗಳಲ್ಲಿ, ಜಿಲ್ಲಾ ಕೇಂದ್ರದ ಸಭೆಗಳಲ್ಲಿ ಕುಮ್ಮಿದೇವಿ ಮಾತನಾಡುತ್ತಾಳೆ. ಅಧಿಕಾರಿಗಳು ಕೇಳುತ್ತಾರೆ. ಹಳ್ಳಿಯ ಸಮಸ್ಯೆಗಳ ಬಗ್ಗೆ ಅಗತ್ಯಗಳ ಬಗ್ಗೆ ಆಕೆಗಿರುವ ಜ್ಞಾನ ಆಳವಾದದ್ದು. ಅಧಿಕಾರಿಗಳೂ ಈಕೆಯ ಅರಿವಿಗೆ ತಲೆದೂಗುತ್ತಾರೆ. ತಮ್ಮ ಕಡೆಯಿಂದ ಮಾಡಲು ಸಾಧ್ಯವಾಗುವುದನ್ನೆಲ್ಲ ಮಾಡಿಕೊಡುತ್ತಾರೆ. ಗುಡಿಯಾಬಾಯಿಯಂತೆ ಈಕೆಗೂ ಗ್ರಾಮಾಭಿವೃದ್ಧಿಯ ಕನಸುಗಳಿವೆ. 'ಹರಿಜನರಿಗೆ ಒಂದಿಷ್ಟೂ ಭೂಮಿ ಇಲ್ಲ. ಅವರಿಗೆ ಸರ್ಕಾರಿ ಭೂಮಿ ಕೊಡಿಸಬೇಕು. ಹಳ್ಳಿಗೊಂದು ಪಂಚಾಯತ್ ಭವನ ಕಟ್ಟಿಸಬೇಕು' ಎನ್ನುತ್ತಾಳೆ. ತನ್ನ ಕನಸುಗಳಿಗೆ ಸಾಥಿ ನೀಡುವ ಒಂದು ದನಿಯೂ ಇಲ್ಲ ಎನ್ನುವ ಅರಿವಿದ್ದರೂ ಕುಮ್ಮಿದೇವಿ ಆಶಾಭಾವನೆ ಬಿಟ್ಟಿಲ್ಲ. "ಮುಂದೆ ಒಂದಲ್ಲ ಒಂದು ದಿನ ಬರುತ್ತದೆ. ಅವರು ತೋರಿಸಿದ್ದಕ್ಕೆಲ್ಲ ನಾನು ಸುಮ್ಮನೆ ಹೆಬ್ಬೆಟ್ಟು ಒತ್ತುವುದಿಲ್ಲ. ಲೆಕ್ಕ-ಪತ್ರ ಕೇಳುತ್ತೇನೆ. ಅದಕ್ಕೆ ಒಂದಿಷ್ಟು ಸಮಯ ಬೇಕಷ್ಟೆ" ಎನ್ನುತ್ತಾಳೆ.

- *ಕೃಪೆ:* ದಿ ಹಿಂದೂ ಪತ್ರಿಕೆ, 21 ಜೂನ್ 1998

# ಯಶಸ್ಸಿನ ಹಾದಿಯಲ್ಲಿ....

## ಒರಿಸ್ಸಾ ಅನುಭವ

*- ಸ್ನೇಹಲತಾ ಪಾಂಡಾ*

ಸದಾ 'ಹಿಂದುಳಿದ ರಾಜ್ಯ' ಎಂದು ಹೆಸರಾದ ಒರಿಸ್ಸಾ ಪಂಚಾಯತ್ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಉನ್ನತ ಸ್ಥಾನ-ಮಾನ ನೀಡುವುದರಲ್ಲಿ ಇತರೆ ರಾಜ್ಯಗಳಿಗಿಂತಲೂ ಒಂದು ಹೆಜ್ಜೆ ಮುಂದಿದೆ ಎಂದರೆ ತಪ್ಪಾಗಲಾರದು.

ಒರಿಸ್ಸಾ ಸರ್ಕಾರವು. 73ನೇ ಸಂವಿಧಾನ ತಿದ್ದುಪಡಿ ಕಾಯಿದೆಯಿಂದಾಗಿ ದೊರಕಿರುವ ಶೇ. 33 ಮೀಸಲಾತಿಯ ಜೊತೆಗೆ ಗ್ರಾಮ ಪಂಚಾಯತ್ ಹಾಗೂ ಪಂಚಾಯತ್ ಸಮಿತಿಗಳ ಸರಪಂಚ್ ಮತ್ತು ಉಪ-ಸರಪಂಚ್ ಹಾಗೂ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳಲ್ಲೂ ಒಂದು ಸ್ಥಾನವನ್ನು ಮಹಿಳೆಗೆ ಮೀಸಲಿಡುವಂತಹ ಕಾಯಿದೆಯನ್ನು ಜಾರಿಗೆ ತಂದಿದೆ. 9164ರ ಒರಿಸ್ಸಾ ಗ್ರಾಮ ಪಂಚಾಯತ್ ಕಾಯಿದೆಗೆ ಮಾಡಿರುವ ತಿದ್ದುಪಡಿಯು ಪಂಚಾಯತ್‌ನ ಉನ್ನತ ಸ್ಥಾನಗಳಲ್ಲಿ ಸದಾ ಓರ್ವ ಮಹಿಳೆ ಇರುವಂತಹ ವ್ಯವಸ್ಥೆಯನ್ನು ರೂಪಿಸಿದೆ.

ಒರಿಸ್ಸಾದಲ್ಲಿ ಮಹಿಳೆಯರಿಗೆ ದೊರಕಿರುವ ಶೇ. 33ರಷ್ಟು ಮೀಸಲಾತಿಯನ್ನು ಮಹಿಳೆಯರ ರಾಜಕೀಯ ಸಬಲೀಕರಣಕ್ಕಾಗಿ. ಗ್ರಾಮೀಣ ರಾಜಕೀಯ ವ್ಯವಸ್ಥೆಯಲ್ಲಿ ಮಹಿಳೆಯರ ಪ್ರತ್ಯೇಕತೆಯನ್ನು ನಿವಾರಿಸಲು ಹಾಗೂ ಗ್ರಾಮೀಣ ಪ್ರದೇಶದಲ್ಲಿ ನಾಯತ್ವದ ಗುಣಮಟ್ಟವನ್ನು ಉತ್ತಮಪಡಿಸಲು ಸಾಧನವನ್ನಾಗಿ ಬಳಸಲಾಗುತ್ತಿದೆ.

ಇತರ ರಾಜ್ಯಗಳಂತೆ ಇಲ್ಲೂ ಕೂಡ ಮಹಿಳೆಯರ ಪಾಲ್ಗೊಳ್ಳುವಿಕೆ ಕುರಿತಂತೆ ಅನೇಕ ಟೀಕೆ. ಆತಂಕ. ಅಪಸ್ವರಗಳು ಕೇಳಿಬಂದವು. ಜಾತಿ ಮತ್ತು ವರ್ಗ ಸಂಘರ್ಷಗಳು. ಊಳಿಗಮಾನ್ಯ ಧೋರಣೆ. ಪುರುಷ ಪ್ರಧಾನ ಮೌಲ್ಯಗಳು. ಹಳ್ಳಿಗಳ ಸಾಮಾಜಿಕ ಪರಿಸ್ಥಿತಿ. ಧಾರ್ಮಿಕ ಪ್ರತ್ಯೇಕತೆಗಳು. ಕೌಟುಂಬಿಕ ಜವಾಬ್ದಾರಿಗಳ ಜೊತೆಗೆ ಹೆಚ್ಚುವರಿ ಜವಾಬ್ದಾರಿ: ಹೆಚ್ಚಿದ ಸಾಮಾಜಿಕ ಜವಾಬ್ದಾರಿಯಿಂದಾಗಿ ಕುಟುಂಬದ ನಿರ್ಲಕ್ಷ್ಯ: ಮಹಿಳೆಯರನ್ನೇ ವಿಶೇಷವಾಗಿ ಬಾಧಿಸುವ ಅಭದ್ರತೆ. ಇತ್ಯಾದಿಗಳನ್ನು ವೈಭವೀಕರಿಸಲಾಯಿತು.

ಈ ಅಪಾದನೆಗಳ ಸತ್ಯಾಸತ್ಯತೆಗಳನ್ನು ಪರಿಶೀಲಿಸಲು ಒರಿಸ್ಸಾದ ಗಂಜಾಂ ಜಿಲ್ಲೆಯ ಬೆರ್‌ಹಾಂಪುರ್ ನಗರದ ಐದು ಪಂಚಾಯತ್‌ಗಳ ಹಲವು ಹಳ್ಳಿಗಳಲ್ಲಿ ಎರಡು ಹಂತಗಳಲ್ಲಿ (ಒಂದು ವರ್ಷದ ಅಂತರದಲ್ಲಿ) ಅಧ್ಯಯನ ನಡೆಸಲಾಯಿತು. ಈ ಅಧ್ಯಯನದ ಫಲಶ್ರುತಿ ಮಹಿಳೆಯರ ಸಾಮರ್ಥ್ಯಕ್ಕೆ ಹಿಡಿದ ಕೈಗನ್ನಡಿಯಾದೀತು.

ಐದೂ ಪಂಚಾಯತ್‌ಗಳಲ್ಲಿದ್ದ ಮಹಿಳೆಯರು ಸುಮಾರು 28 ರಿಂದ 40 ವರ್ಷ ವಯಸ್ಸಿನೊಳಗಿನವರು. ಇಬ್ಬರು ಸರಪಂಚರೂ ಮೂವರು ಉಪ-ಸರಪಂಚರೂ ಆಗಿದ್ದರು. ಈ ಐವರು ಆಯ್ಕೆಗೆ ಅವರ ಕುಟುಂಬದ ಸದಸ್ಯರ ಬೆಂಬಲ ಮತ್ತು ಒತ್ತಾಸೆಗಳೇ ಪ್ರಮುಖ ಕಾರಣಗಳಾಗಿದ್ದವು. ಒಂದು ಹಳ್ಳಿಯಲ್ಲಿ ಓರ್ವ ಯುವತಿಯ ತಂದೆ-ತಾಯಿಯ ಆಕೆಗೆ ಬೆಂಬಲ ನೀಡದಿದ್ದಾಗ ಅವಳ ಅಣ್ಣ ತಂದೆ-ತಾಯಂದಿರನ್ನು ಒಪ್ಪಿಸುವುದರಲ್ಲಿ ಸಫಲನಾಗಿದ್ದ.

ಮೊದಲಿಗೆ ಗ್ರಾಮಸಭೆಗಳಿಗೆ ಹೋಗಲು ಹೆದರುತ್ತಿದ್ದ ಮಹಿಳೆಯರಿಗೆ ಕುಟುಂಬದ ಪುರುಷ ಸದಸ್ಯರು ಜೊತೆ ನೀಡುತ್ತಿದ್ದರು. ಆನಂತರ ಮಹಿಳೆಯರು ಏಕಾಂಗಿಗಳಾಗಿ ಎಲ್ಲ ಸಭೆಗಳಲ್ಲಿ ಭಾಗವಹಿಸತೊಡಗಿದರು. ಮೊದಲ ಮೂರ್ನಾಲ್ಕು ಸಭೆಗಳಲ್ಲಿ ಏನೂ ಮಾತನಾಡದೆ. ಕೇವಲ ಎಲ್ಲವನ್ನು ನೋಡುತ್ತಾ. ಕೇಳುತ್ತಾ ಕುಳಿತಿದ್ದ ಸದಸ್ಯೆಯರು ಬರಬರುತ್ತಾ ಮಾತನಾಡಲು ಆರಂಭಿಸಿದರು. ಪ್ರಶ್ನೆ ಕೇಳಿದರು. ತಮಗೆ ಬೇಕಾದ ಯೋಜನೆ ಮಂಡಿಸಿದರು. ಲೆಕ್ಕ-ಪತ್ರ ನೋಡಿದರು.... ಈ ಮಹಿಳೆಯರು ಪ್ರಧಾನವಾಗಿ ಪ್ರಸ್ತಾಪ ಮಾಡುತ್ತಿದ್ದ ವಿಷಯಗಳು ಕುಡಿಯುವ ನೀರು. ಸಂಪರ್ಕ ವ್ಯವಸ್ಥೆ. ಗ್ರಾಮೀಣ ಅರಣ್ಯ ಸಂರಕ್ಷಣೆ. ಗೋಮಾಳ ಸಂರಕ್ಷಣೆ. ಪಡಿತರ ವ್ಯವಸ್ಥೆ. ವರ್ಷಪೂರ್ತಿ ಉದ್ಯೋಗಾವಕಾಶ ಒದಗಿಸುವ ಯೋಜನೆ. ಪ್ರಾಥಮಿಕ ಆರೋಗ್ಯ ಕೇಂದ್ರ. ಶಾಲಾ ಕಟ್ಟಡ ಇತ್ಯಾದಿಗಳಿಗೆ ಸಂಬಂಧಿಸಿದ್ದವು.

ಒಂದು ವರ್ಷದ ಅವಧಿಯೊಳಗೆ ಈ ಮಹಿಳೆಯರು ಹಳ್ಳಿಯ ಅನೇಕ ಸಮಸ್ಯೆಗಳಿಗೆ ಪರಿಹಾರ ಒದಗಿಸಿದ್ದರು. ಸಭೆಗಳಲ್ಲಿ ಭಾಗವಹಿಸಲು ಉತುಕರಾಗಿದ್ದರು. ಸಭೆಗೆ ಹೋಗುವ ಮುನ್ನ ತಯ್ಯಾರಿ ನಡೆಸುತ್ತಿದ್ದರು. ಅಧಿಕಾರಿಗಳನ್ನು ಸಂಪರ್ಕಿಸುವಲ್ಲಿ ಹಿಂದೆ ಇದ್ದ ಹಿಂಜರಿತ ಈಗ ಇಲ್ಲವಾಗಿತ್ತು. ಅಧಿಕಾರಿಗಳೂ ಕೂಡ ಮಹಿಳಾ ಸದಸ್ಯರೊಂದಿಗೆ ಉತ್ತಮ ಸಂಬಂಧ ಬೆಳೆಸಿಕೊಂಡಿದ್ದರು.

ಮೂರು ಹಳ್ಳಿಗಳಲ್ಲಿ ಹಲವಾರು ವರ್ಷಗಳಿಂದ ಬಾಕಿ ಇದ್ದ ಯೋಜನೆಗಳಾದ ಶಾಲಾ ಕಟ್ಟಡಗಳ ದುರಸ್ತಿ. ಎರಡು ಹಳ್ಳಿಗಳಲ್ಲಿ ಕೊಳವೆ ಬಾವಿಗಳು. ಹಳ್ಳಿಗಳ ಸಂಪರ್ಕ ರಸ್ತೆಗಳ ದುರಸ್ತಿ ಯೋಜನೆಗಳು ಒಂದು ವರ್ಷದಲ್ಲಿ ಪೂರೈಸಿದ್ದವು. ಎಲ್ಲಕ್ಕಿಂತ ಮಿಗಿಲಾಗಿ ಪ್ರತಿಶತ 90ರಷ್ಟು ಮಹಿಳಾ ಸದಸ್ಯರು ಎಲ್ಲ ಸಭೆಗಳಿಗೆ ಹಾಜರಾಗುತ್ತಿದ್ದುದ್ದಲ್ಲದೆ ಸಕ್ರಿಯವಾಗಿ ಚರ್ಚೆಗಳಲ್ಲಿ ಭಾಗವಹಿಸುತ್ತಿದ್ದರು.

ಈ ಒಂದು ವರ್ಷದ ಅವಧಿಯಲ್ಲಿ ಮಹಿಳಾ ಸದಸ್ಯೆಯರ ಕುರಿತಾದ ಗ್ರಾಮದ ಜನರ ಅಭಿಪ್ರಾಯಗಳೂ ಧನಾತ್ಮಕವಾಗಿ ಬದಲಾಗಿದ್ದವು. ಮಹಿಳೆಯರ ರಾಜಕೀಯ ಪ್ರವೇಶವನ್ನು ಹಳ್ಳಿಯ ಗಂಡಸರು ಪುರಸ್ಕರಿಸಿದರು. ಮಹಿಳಾ ಸದಸ್ಯರ ಕುಟುಂಬದ ಅನೇಕ ಪುರುಷರು (ಸುಮಾರು 60%) ಪಂಚಾಯತ್ ಕೆಲಸ - ಕಾರ್ಯಗಳಲ್ಲಿ ಸಹಕಾರ ನೀಡಿದರು. ಇಂತಹ ಸಹಕಾರವನ್ನು ಪುರುಷರಿಂದ ಅಧಿಕಾರ ದುರುಪಯೋಗವೆಂದಾಗಲಿ. ದಬ್ಬಾಳಿಕೆಯೆಂದಾಗಲಿ ಯಾರೂ ದೂಷಿಸಲಿಲ್ಲ. ಬದಲಿಗೆ ಪರಸ್ಪರ ನೆರವು ಎಂದೇ ಬಗೆದರು. ಆದರೆ ಎರಡೇ ಎರಡು ಪ್ರಕರಣದಲ್ಲಿ ಹೊರತುಪಡಿಸಿ ಯಾವ ಮಹಿಳಾ ಸದಸ್ಯೆಯ ಗಂಡಂದಿರೂ ಹೆಂಡತಿಯರ ಮನೆ ಕೆಲಸಗಳಿಗೆ ನೆರವು ನೀಡಲಿಲ್ಲ. ಈ ಇಬ್ಬರಲ್ಲಿ ಒಬ್ಬಾಕೆಯ ಗಂಡ ಶಾಲಾ ಶಿಕ್ಷಕನಾಗಿದ್ದ. ಮತ್ತೋರ್ವ ಹಿಂದೆ ತಾನೇ ಸ್ವತಃ ಚುನಾಯಿತ ಸದಸ್ಯನಾಗಿದ್ದ.

ಎರಡನೇ ಹಂತದ ಅಧ್ಯಯನದಲ್ಲಿ ಕಂಡುಬಂದ ಮತ್ತೊಂದು ಪ್ರಧಾನ ಅಂಶ. ಕುಟುಂಬಗಳು ದೊಡ್ಡದಾದಷ್ಟೂ ಸಮಸ್ಯೆಗಳು ಹೆಚ್ಚುತ್ತವೆ ಎನ್ನುವುದರ ಅರಿವು ಚುನಾಯಿತ ಮಹಿಳಾ ಸದಸ್ಯರಿಗಷ್ಟೇ ಅಲ್ಲದೆ ಹಳ್ಳಿಗಳ ಅನೇಕ ಮಹಿಳೆಯರಿಗೆ ಬಂದಿದ್ದು. ಅನೇಕ ಮಹಿಳೆಯರು ಈ ಒಂದು ವರ್ಷದ ಅವಧಿಯಲ್ಲಿ ಕುಟುಂಬ ಯೋಜನಾ ಶಸ್ತ್ರಚಿಕಿತ್ಸೆಗೆ ಒಳಗಾಗಿದ್ದರು. ಪುರುಷರು ಈ ಚಿಕಿತ್ಸೆಗೆ ಹೆದರುತ್ತಿದ್ದಾಗ ಮಹಿಳೆಯರು ಸ್ವ ಇಚ್ಛೆಯಿಂದ ಮುಂದೆ ಬಂದರು. ಕುಟುಂಬ ಯೋಜನಾ ಶಿಬಿರಗಳಿಗೆ ಬೆಂಬಲವಾಗಿ ನಿಂತರು. ಈ ಕ್ರಾಂತಿಕಾರಕ ಬದಲಾವಣೆಗೆ ಕಾರಣವಾಗಿದ್ದು ಓರ್ವ ಉಪ-ಸರಪಂಚ್ ಆಗಿದ್ದಾಕೆ ತಾನೇ ಸ್ವತಃ ಈ ಶಸ್ತ್ರಚಿಕಿತ್ಸೆ ಮಾಡಿಸಿಕೊಂಡು ಮಾದರಿಯಾಗಿದ್ದು.

ಮಹಿಳೆಯರ ರಾಜಕೀಯ ಪ್ರವೇಶದಿಂದಾಗಿ ಗ್ರಾಮಗಳ ಸಾಮಾಜಿಕ ರಚನೆಯಲ್ಲಿ ಕಂಡುಬಂದ ಮತ್ತೊಂದು ಗಮನಾರ್ಹ ಬದಲಾವಣೆ ಎಂದರೆ ಜಾತಿ-ವರ್ಗಗಳ ಭೇದವನ್ನು ಮೀರಿ ಬೆಳೆದ ಸಾಮುದಾಯಿಕ ಭಾವನೆ. ಒಂದು ಗ್ರಾಮದಲ್ಲಿ ಅಲ್ಲಿನ ಮಹಿಳಾ ಸರಪಂಚ್‌ನ ಮುಂದಾಳತ್ವದಿಂದಾಗಿ ಒಂದು ಜಾತಿಗೆ ಮಾತ್ರ ಸೀಮಿತವಾಗಿದ್ದ ಒಂದು ಧಾರ್ಮಿಕ ಆಚರಣೆಯಲ್ಲಿ ಹಳ್ಳಿಯ ಎಲ್ಲ ಜನರೂ ಪ್ರೀತಿಯಿಂದ ಭಾಗವಹಿಸಿದರು. ಆಕೆಯ ನಾಯಕತ್ವವನ್ನು ಹಳ್ಳಿಯ ಜನ ಒಪ್ಪಿಕೊಳ್ಳಲು ಕಾರಣವಾಗಿದ್ದು - ಹಳ್ಳಿಯ ಪ್ರಗತಿಗಾಗಿ ಆಕೆ ಕೈಗೊಂಡಿದ್ದ ಅನೇಕ ಪ್ರಗತಿಪರ ಕಾರ್ಯಕ್ರಮಗಳು.

ಈ ಐದು ಹಳ್ಳಿಗಳಲ್ಲಿ ಇತ್ತೀಚಿನ ವರ್ಷಗಳಲ್ಲಿ ಆಗಿರುವ ಗಮನಾರ್ಹ ಬದಲಾವಣೆಗಳಿಗೆ ಮಹಿಳಾ ಸದಸ್ಯರ ಕೊಡುಗೆ ಪ್ರಮುಖ ಕಾರಣವಾಗಿದೆ.

ಕೃಪೆ: 'ಕುರುಕ್ಷೇತ್ರ'

## ನನ್ನ ಅನುಭವ....

*- ಎಸ್. ವರಲಕ್ಷ್ಮಿ*

ನಾನು ನನ್ನ ಓಟಿನ ಹಕ್ಕನ್ನು ಮೊದಲು ಚಲಾಯಿಸಿದ್ದು ನನಗಾಗಿಯೇ. ಅಂದರೆ 1993ರ ಡಿಸೆಂಬರ್‌ನಲ್ಲಿ ನಡೆದ ಗ್ರಾಮಪಂಚಾಯ್ತಿ ಚುನಾವಣೆಯಲ್ಲಿ ಕುಂಬಳಗೋಡು ಗ್ರಾಮಪಂಚಾಯ್ತಿ ಸದಸ್ಯ ಸ್ಥಾನಕ್ಕೆ ಸ್ಪರ್ಧಿಸಿದ್ದ ನಾನು ರಾಜಕೀಯ ಪ್ರಕ್ರಿಯೆಯಲ್ಲಿ ಪ್ರಥಮ ಬಾರಿಗೆ ಭಾಗವಹಿಸಿದ್ದೆ. ಅದೂ ಮತದಾರಳಾಗಿ ಹಾಗೂ ಸ್ಪರ್ಧಿಯಾಗಿ.

ನನ್ನದು ಸಾಮಾನ್ಯ ವರ್ಗದ ಮಹಿಳೆಯರಿಗೆ ಮೀಸಲಾದ ಸ್ಥಾನ. ನನಗೆ ಇನ್ನಿಬ್ಬರು ಮಹಿಳೆಯರು ಪ್ರತಿಸ್ಪರ್ಧಿಗಳಿದ್ದರು. ಆ ಚುನಾವಣೆಯ ಒಂದು ಪ್ರಮುಖ ಅಂಶ ಎಂದರೆ ನಾನು ಒಂದೇ ಒಂದು ರೂಪಾಯಿಯನ್ನೂ ಖರ್ಚು ಮಾಡಲಿಲ್ಲ. CITU ಕಾರ್ಮಿಕ ಸಂಘಟನೆಯೊಂದಿಗೆ ಆ ಪ್ರದೇಶದ ಕಾರ್ಮಿಕರ ಹಕ್ಕುಗಳಿಗಾಗಿ ನಡೆಸಿದ ಹೋರಾಟದಲ್ಲಿ ನಾನು ಭಾಗವಹಿಸಿದ್ದೆ. ಆ ಹೋರಾಟಗಳು ಹಾಗೂ ಅದರ ಯಶಸ್ಸು ನನ್ನ ಆಗ್ಕೆ ನೆರವಾಯ್ತು.

ಆರಂಭದಲ್ಲಿ ಗ್ರಾಮ ಪಂಚಾಯ್ತಿ ಸದಸ್ಯಳಾಗಿ ನನಗೂ ನೂರೆಂಟು ಕನಸುಗಳಿದ್ದವು. ಏನೇನೋ ಮಾಡಬೇಕು. ನಮ್ಮ ಪ್ರದೇಶವನ್ನು ಉತ್ತುಂಗಕ್ಕೆ ಏರಿಸಬೇಕೆಂಬ ಸ್ಫೂರ್ತಿ ಇತ್ತು. ತುಂಬಾ ಆಶಾವಾದಿಯಾಗಿದ್ದೆ. ಪಂಚಾಯತ್‌ರಾಜ್ ವ್ಯವಸ್ಥೆ ನನಗೆ ಇನ್ನಿಲ್ಲದಷ್ಟು ಅಧಿಕಾರ. ಅವಕಾಶ. ಸೌಲಭ್ಯಗಳನ್ನು ಕೊಟ್ಟಿದೆ ಎಂದು ಭಾವಿಸಿದೆ. ಆದರೆ ಅದರಲ್ಲಿ ಎಲ್ಲವೂ ನಿಜವಾಗಿರಲಿಲ್ಲ.

ನಮಗಿದ್ದ ಸೀಮಿತ ಅಧಿಕಾರ, ಸೀಮಿತ ಸೌಲಭ್ಯ, ಸೀಮಿತ ಅವಕಾಶದ ಅರಿವು ನಿಧಾನವಾಗಿ ಆಯಿತು. ಒಟ್ಟು ವ್ಯವಸ್ಥೆಯಲ್ಲಿದ್ದ ಲೋಪ-ದೋಷಗಳು ಹೊಸತಾಗಿ ರಾಜಕೀಯಕ್ಕೆ ಬಂದಿದ್ದ ನನ್ನನಂತಹವರಿಗೆ ಅನೇಕ ತೊಡಕುಗಳನ್ನು ಒಡ್ಡಿದವು. 'ಮುಂದೆ ನುಗ್ಗಿ, ನಿಮ್ಮ ಹಿಂದೆ ನಾವಿದ್ದೇವೆ' ಎನ್ನುವವರು ಯಾರೂ ಇರಲಿಲ್ಲ. ಕಾರ್ಮಿಕ ಸಂಘಟನೆ ಹಾಗೂ ಮಹಿಳಾ ಸಂಘಟನೆಗಳಲ್ಲಿ ನನಗಿದ್ದ ಹೆಚ್ಚಿನ ಜವಾಬ್ದಾರಿಗಳಿಂದಾಗಿ ಸಮಯಾವಕಾಶದ ಕೊರತೆಯೂ ಇತ್ತು.

ಆದರೂ, ಓರ್ವ ಚುನಾಯಿತ ಸದಸ್ಯಳಾಗಿ, ಏಕಾಂಗಿಯಾದರೂ ಅನೇಕ ಕೆಲಸಗಳನ್ನು ಮಾಡಿದ್ದೇನೆ. ನನ್ನ ಗ್ರಾಮಕ್ಕೆ ಅಗತ್ಯವಾಗಿ ಬೇಕಾಗಿದ್ದ ನೀರಿನ ಟ್ಯಾಂಕ್ ನಿರ್ಮಾಣ, ಬಡವರಿಗೆ ಹಸಿರು ಕಾರ್ಡ್, ಅಂಗನವಾಡಿ ಕೇಂದ್ರ ಕುರಿತಂತೆ ತಾಲ್ಲೂಕು ಪಂಚಾಯತಿ ಹಾಗೂ ಜಿಲ್ಲಾ ಪಂಚಾಯ್ತಿಯವರೆಗೆ ಅಹವಾಲು ಕೊಂಡೊಯ್ದೆ. ನನ್ನ ಈ initiative ನೋಡಿ 'ಪ್ರಭಾವಿ' ವ್ಯಕ್ತಿಗಳು ಅಡ್ಡಗಾಲು ಹಾಕಲು ಬಂದರು. ಬೆದರಿಕೆ ಒಡ್ಡಿದರು. ನಾನು ಜಗ್ಗಲಿಲ್ಲ. ಇದರ ಬಗ್ಗೆಯೇ ಜಿಲ್ಲಾ ಪಂಚಾಯ್ತಿವರೆಗೆ ದೂರು ಒಯ್ದೆ. ಇದಿಷ್ಟು ಮಾಡಲು ನಾನು ಅಂದು ತುಂಬಾ ಕಷ್ಟಪಟ್ಟಿದ್ದೆ.

ಈ ಬೇಡಿಕೆಗಳ ಈಡೇರಿಕೆಗಾಗಿ ಸಹಿ ಸಂಗ್ರಹ ಚಳವಳಿ, ನಿಯೋಗ ಕೊಂಡೊಯ್ಯುವುದು, ರಸ್ತೆ ತಡೆ ಚಳವಳಿಗಳನ್ನು ಸಂಘಟಿಸಿದೆ. ಊರಿನ ಜನ ಸಹಕರಿಸಿದರು. ಜನರ ಎಚ್ಚರ ನೋಡಿ ಬೇಡಿಕೆ ಈಡೇರುವ ನಿಶಾನೆ ಕಂಡಿತು. ಆದರೆ ಅದು ಫಲ ದೊರಕುವ ವೇಳೆಗೆ ತಾಲ್ಲೂಕು ಪಂಚಾಯ್ತಿ ಹಾಗೂ ಜಿಲ್ಲಾ ಪಾಂಚಾಯ್ತಿಯ ಯೋಜನೆಗಳಾಗಿ ಬಂದವು. ಅದು ನಮ್ಮ ಹೋರಾಟಕ್ಕೆ ಮಸಿ ಬಳಿಯುವ ಯತ್ನವಾಗಿತ್ತು.

ಗೇರುಪಾಳ್ಯದಲ್ಲಿ ಅಕ್ರಮ ಭೂಮಿಯನ್ನು ಸಕ್ರಮಗೊಳಿಸಿ ಕೊಡುವುದಾಗಿ ನಂಬಿಸಿ ಅದಕ್ಕಾಗಿ ಇದ್ದ ಫಾರಂಗಳಿಗಾಗಿ ಪ್ರತಿಯೊಬ್ಬರಿಂದಲೂ ಹೆಚ್ಚೆಚ್ಚು ಹಣ ಸಂಗ್ರಹಿಸಿರುವುದು ತಿಳಿದುಬಂತು. ನಾವು ನಾಲ್ಕೈದು ಜನ ಮಹಿಳಾ ಸದಸ್ಯರು ಇದರ ವಿರುದ್ಧ ದನಿ ಎತ್ತಿ, ಗಲಾಟೆ ಮಾಡಿ ಹೆಚ್ಚುವರಿಯಾಗಿ ಸಂಗ್ರಹ ಮಾಡಿದ್ದ ಹಣವನ್ನೆಲ್ಲ ಅವರಿಗೇ ವಾಪಸ್ಸು ಕೊಡಿಸಿದೆವು.

ಕುಂಬಳಗೋಡಿನಲ್ಲಿ ಡ್ವಾಕ್ರ ಯೋಜನೆ ಜಾರಿಗೆ ಬರಲು, ಅಂಗನವಾಡಿ ಕೇಂದ್ರಕ್ಕೆ ಸ್ಥಳ ಒದಗಿಸಲು, ಅಂಗನವಾಡಿ ಕಾರ್ಯಕರ್ತೆಯ ಹುದ್ದೆ ಕೊಡಿಸಲು ನಾನು ಶ್ರಮಪಟ್ಟಿದ್ದೇನೆ. ನಮ್ಮ ಮನೆಯ ಒಂದು ಕೋಣೆಯನ್ನೇ ಅಂಗನವಾಡಿ ಕೇಂದ್ರಕ್ಕಾಗಿ ಬಿಟ್ಟುಕೊಟ್ಟಿದ್ದೇವೆ.

---

## ದೇಶ ಜಾತಿ

(ಚಲುವಯ್ಯ ಚಲುವೋ ತಾನತಂದಾನ ರಾಗ)

ಕೇಳ್ರಪ್ಪ ಕೇಳೀ ಎಂಥ ಮಾತಿದೂ
ನಮ್ಮ ದೇಶಾದ ಜನತಲೆ ತಗ್ಗಿಸೊ ಮಾತಿದೂ

ವಿಶ್ವವೆಲ್ಲ ಕುದ್ರೆಯೇರಿ ನಾಗಾಲೋಟ ಓಡುತಿದ್ರೆ
ನಮ್ಮವರು ಮಾತ್ರ ಜಾತಿಕತ್ತೆ ಹೊತ್ಕೊಂಡು ನಿಂತವ್ರೆ ॥ ೧ ॥

ನ್ಯಾಯ ನೀತಿ ಅನ್ನುತ್ತಾರೆ ಧರ್ಮದ ವೇಷ ಕಟ್ಟುತ್ತಾರೆ
ಜನರನ್ನ ಮಾತ್ರ ಕಸ ಸ್ಟುಂಗೆ ಸುಟ್ಟೇಬಿಡ್ತಾರೆ ॥ ೨ ॥

ವೀರಾಧಿ ವೀರರಂತೆ ರಣಧೀರ ಶೂರರಂತೆ
ಮಲಗಿದ್ದ ಕಂದಮ್ಮಗಳ್ನ ಕೊಲ್ಲೊ ಮೂಢರು ॥ ೩ ॥

ಯಾರಿಗೆ ಬೇಕು ಜಾತಿ ಜಗಳ ಮನುಷ್ಯಪ್ರೀತಿ ಇಲ್ಲದ ರಗಳೆ
ಬಡವರ ಗೋಳು ಮುಗಿಲು ಮುಟ್ಟಿ ದೇಶಹಾಳಾಯ್ತು ॥ ೪ ॥

ಜಾತ್ಯಾತೀತರಾಷ್ಟ್ರ ಅಂತ ಗಾಂಧಿತಾತ ಜೀವಬಿಟ್ಟ
ಪುಢಾರಿಗಳು ಓಟಿಗಾಗಿ ಜಾತಿ ಕಟ್ಟತಾರೆ ॥ ೫ ॥

*- ಶಾಂತಾ ನಾಗರಾಜ್*

## 'ಸತಿ'ಯ ದೇವರಾಲದಲ್ಲಿ 'ಸರಪಂಚ್' ಲಲಿತಾ ಸೈನಿ

ರಾಜಸ್ಥಾನದ 'ದೇವರಾಲ' ಗ್ರಾಮದ ಹೆಸರು ಗೊತ್ತಿಲ್ಲದವರು ಯಾರು? 12 ವರ್ಷಗಳ ಹಿಂದೆ 17 ವರ್ಷದ ಯುವತಿ ರೂಪ್‌ಕನ್ವರ್ 'ಸತಿ'ಯಾದ ಊರು. ಸಂಪ್ರದಾಯದ ಹೆಸರಿನಲ್ಲಿ ಪ್ರಗತಿಯ ಗಡಿಯಾರದ ಮುಳ್ಳುಗಳನ್ನೇ ಶತಮಾನದಷ್ಟು ಹಿಂದಕ್ಕೆ ತಿರುಗಿಸಿದ ಊರು. ಅಂದು ಸತಿಯಾಗಿ ರೂಪ್ ಕನ್ವರ್‌ಳನ್ನು ಬಲಿತೆಗೆದುಕೊಂಡ ದೇವರಾಲ ಇಂದು 'ಸರಪಂಚ'ಳಾಗಿ ಲಲಿತಾಸೈನಿಯನ್ನು ಸಮಾಜಕ್ಕೆ ಕೊಡುಗೆ ನೀಡಿದೆ.

ರಾಜಸ್ಥಾನದಲ್ಲಿ 1996ರಲ್ಲಿ ಪಂಚಾಯತ್ ಚುನಾವಣೆ ನಡೆದಾಗ ಮಹಿಳಾ ಮೀಸಲಾತಿಯ ಕ್ಷೇತ್ರವಾಗಿದ್ದ ದೇವರಾಲದಲ್ಲಿ ಲಲಿತಾಸೈನಿ ಚುನಾವಣೆಗೆ ಸ್ಪರ್ಧಿಸಿದ್ದು ಕುಟುಂಬದ ಒತ್ತಡದಿಂದಾಗಿ. ಅದುವರೆಗೂ ಮಾವ ಸ್ಪರ್ಧಿಸುತ್ತಿದ್ದ ಸ್ಥಾನಕ್ಕೆ ಲಲಿತಾ ಸ್ಪರ್ಧಿಸುವಂತಾಗಿದ್ದು ಆಕೆಗಿದ್ದ ವಿದ್ಯಾರ್ಹತೆಯಿಂದಾಗಿ. ಈ ವಿದ್ಯೆ ಲಲಿತಾಗೆ ಚುನಾವಣೆಯಲ್ಲಿ ಗೆಲುವನ್ನಷ್ಟೇ ಅಲ್ಲ, ಆನಂತರ 'ಸರಪಂಚ್' ಸ್ಥಾನವನ್ನೂ ತಂದುಕೊಟ್ಟಿತು. ಆದರೆ ಆಕೆಯ ಬದುಕಿನಲ್ಲಿ ಮಾತ್ರ ಯಾವ ಬದಲಾವಣೆ ಆಗಿರಲಿಲ್ಲ.

ಹಿಂದಿನಂತೆಯೇ. ಮುಖ ಕಾಣದಂತೆ ಮುಸುಕು ಹಾಕಿ. ಮನೆಯ ಇತರ ಹೆಂಗಸರ ಜೊತೆ ಅಡಿಗೆ - ಕಸ - ಮುಸುರೆ ಕೆಲಸ ಮಾಡುತ್ತಾ. ಮಕ್ಕಳನ್ನು ಸಾಕುತ್ತಾ ಇದ್ದಳು. ಮಾವ ಊರಿನ ಇತರ ಗಂಡಸರೊಂದಿಗೆ ಪಂಚಾಯತ್ ಕೆಲಸಗಳನ್ನ. ರಾಜಕೀಯವನ್ನು ಚರ್ಚೆ ಮಾಡುತ್ತಿದ್ದ. ಪೊಲೀಸ್ ಇಲಾಖೆಯಲ್ಲಿ ನೌಕರಿಯಲ್ಲಿದ್ದ ಗಂಡನಂತೂ ಇದೆಲ್ಲದರಿಂದ ದೂರವೇ ಉಳಿದಿದ್ದ.

ಆದರೆ ಎರಡು ವರ್ಷಗಳಲ್ಲಿ ಲಲಿತಾ ಸೈನಿಯ ಚಿತ್ರವೇ ಬದಲಾಯಿತು. ಮುಖ ಮುಚ್ಚಿದ ಮುಸುಕು ತಲೆಯ ಮೇಲೆ ಕೂತಿತ್ತು. ಬಗಲಿಗೆ ಚೀಲ. ಕೈಗಳಲ್ಲಿ ಕಡತಗಳು ಮುಖದಲ್ಲಿ ಆತ್ಮವಿಶ್ವಾಸ ಮನೆಮಾಡಿದ್ದವು. ಈಗ ಅವಳ ಕಾರ್ಯಕ್ಷೇತ್ರ ಬರಿಯ ಅಡಿಗೆ ಮನೆಯಾಗಿರಲಿಲ್ಲ. ಇಡಿಯ ಹಳ್ಳಿಯಾಗಿತ್ತು. ಅವಳ ಮಾವ ಹಾಸ್ಯದಿಂದ ಅವಳನ್ನು 'ಸರಪಂಚ್ ಸಾಹಬ್' ಎನ್ನತೊಡಗಿದ.

ಲಲಿತಾ ನಿತ್ಯ ಪಂಚಾಯತ್ ಕಚೇರಿಗೆ ಭೇಟಿ ನೀಡುತ್ತಾಳೆ. ರಸ್ತೆ ರಿಪೇರಿ. ಕಟ್ಟಡ ನಿರ್ಮಾಣ ಇತ್ಯಾದಿಗಳನ್ನು ಖುದ್ದಾಗಿ ಉಸ್ತುವಾರಿ ಮಾಡುತ್ತಾಳೆ. ಎಲ್ಲ ಜನರಿಗೆ ಪಡಿತರ ಚೀಟಿ ದೊರಕಿಸಿಕೊಡಲು ಸಹ ಸದಸ್ಯೆಯರ ಜೊತೆಗೂಡಿ ಚಳವಳಿಯನ್ನೇ ರೂಪಿಸುತ್ತಾಳೆ. ಮಹಿಳೆಯರ ರಾಜಕೀಯ ಪ್ರವೇಶ power politicsನ ತಂತ್ರಗಳಿಗೆ ಹೊಡೆತ ಕೊಟ್ಟಿರುವುದನ್ನು ವಿಶ್ಲೇಷಿಸುತ್ತಾಳೆ. ಆ ಭಾಗದ ಶಾಸಕನೊಬ್ಬ ಮಹಿಳೆಯರ ಮತ ಸೆಳೆಯಲು ತನ್ನೊಂದಿಗೆ ಚರ್ಚಿಸಲು ಯತ್ನಿಸುತ್ತಿರುವುದು 'ಬದಲಾದ ತಂತ್ರಗಾರಿಕೆಯ ಫಲ' ಎಂದು ವಿಮರ್ಶಿಸುತ್ತಾಳೆ.

'ದೇವರಾಲ' ಸತಿಯಿಂದಾಗಿ ಕುಖ್ಯಾತಿ ಪಡೆದರೂ ಲಲಿತಾ ಸೈನಿಯಿಂದಾಗಿ ದೇವರಾಲದ ಮಹಿಳೆಯರು ಆತ್ಮವಿಶ್ವಾಸ ಹೊಂದುತ್ತಿದ್ದಾರೆ. ದೇಶದ ಉದ್ದಗಲಕ್ಕೂ ಇಂತಹ ಅನೇಕ ದೇವರಾಲಗಳಿವೆ. ಹಾಗೆಯೇ ಅವುಗಳ ಚರಿತ್ರೆ ಬದಲಿಸಬಲ್ಲ ಲಲಿತಾ ಸೈನಿಯರಿದ್ದಾರೆ.

- ಕೃಪೆ: ಔಟ್‌ಲುಕ್

ಸಂಪಾದಕ ಮಂಡಲಿ
ಎನ್. ಗಾಯತ್ರಿ
ನೇಮಿಚಂದ್ರ, ದೇವಿ
ಡಾ|| ಬಿ. ಎನ್. ಸುಮಿತ್ರಾಬಾಯಿ
ಶಾಂತಾ ನಾಗರಾಜ್
ಎಚ್. ಎಸ್. ಗೀತಾ

ಪ್ರಕಾಶಕರು
ಜಾಗೃತಿ ಮಹಿಳಾ
ಅಧ್ಯಯನ ಕೇಂದ್ರ,
ಬೆಂಗಳೂರು

ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10/- ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು.

ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು

ಬದಲಾದ ವಿಳಾಸಗಳನ್ನು ದಯವಿಟ್ಟು ಬರೆದು ತಿಳಿಸಿ.

Achala - Edited by Dr. N. Gayathri, Published by Dr. G. Ramakrishan on behalf of Jagruthi Mahila Adhyayana Kendra, Printed at Lipi Mudrana, Basavanagudi, Bangalore - 560 004

ಆತ್ಮೀಯರೆ,

ಕಳೆದ 12 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನವಿಟ್ಟು "ಅಚಲ" ಪತ್ರಿಕೆಯನ್ನು ನಿಮ್ಮದನ್ನಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮುಂದಿನ ಸಂಚಿಕೆಯಿಂದ 'ಅಚಲ' ಮಾಸಪತ್ರಿಕೆಯಾಗಿ ಹೊರಬರಲಿದೆ ಎಂಬುದನ್ನು ತಮಗೆ ತಿಳಿಸಲು ತುಂಬ ಹರ್ಷಿಸುತ್ತೇವೆ. ವರ್ತಮಾನದ ಘಟನೆಗಳನ್ನು ಶೀಘ್ರವಾಗಿ, ಆಯಾಕಾಲದಲ್ಲೇ ದಾಖಲಿಸಲು ಇದರಿಂದ ನೆರವಾಗಲಿ ಎಂಬುದು ನಮ್ಮ ಈ ನಿರ್ಧಾರಕ್ಕೆ ಮುಖ್ಯ ಕಾರಣ.

'ಅಚಲ' ಮಾಸಪತ್ರಿಕೆಯಾಗಿ, ತನ್ನ ಎಂದಿನ ಗುಣಮಟ್ಟವನ್ನೂ ಉಳಿಸಿಕೊಳ್ಳಬೇಕಿರುವುದರಿಂದ, ಹೆಚ್ಚುತ್ತಿರುವ ಮುದ್ರಣ ವೆಚ್ಚವನ್ನು ತೂಗಿಸಲು ಪತ್ರಿಕೆಯ ಚಂದಾದರವನ್ನು ಕೆಳಕಂಡಂತೆ ಹೆಚ್ಚಿಸುವುದು ಅನಿವಾರ್ಯವಾಗಿದೆ. ತಾವು ಎಂದಿನಂತೆಯೇ ಇನ್ನು ಮುಂದೆಯೂ ಅಚಲದ ಚಂದಾದಾರರಾಗಿ, ಬೆಂಬಲಿಸಬೇಕೆಂದು ಕಳಕಳಿಯಿಂದ ಮನವಿ ಮಾಡುತ್ತಿದ್ದೇವೆ.

*ಅಚಲ ವಿಳಾಸ ಬದಲಾಗಿದೆ. ದಯವಿಟ್ಟು ಗಮನಿಸಿ*
***713, ವಿಜಯಾ ಮ್ಯಾನ್‌ಷನ್, 1ನೇ ಮುಖ್ಯರಸ್ತೆ, ಆರ್.ಪಿ.ಸಿ. ಲೇಔಟ್, ಬೆಂಗಳೂರು - 560 040***

*ಬದಲಾದ ಚಂದಾ ವಿವರಗಳು ಹೀಗಿವೆ :*

| | | |
|---|---|---|
| ವಾರ್ಷಿಕ ಚಂದಾ | : | ರೂ. 40/- (ವ್ಯಕ್ತಿಗಳಿಗೆ) |
| | | ರೂ. 75/- (ಸಂಸ್ಥೆಗಳಿಗೆ) |
| ಅಜೀವ ಚಂದಾ | : | ರೂ. 300/- (ವ್ಯಕ್ತಿಗಳಿಗೆ) |
| | | ರೂ. 400/- (ಸಂಸ್ಥೆಗಳಿಗೆ) |

ಪತ್ರಕರ್ತೆ ಹಾಗೂ ಜನವಾದಿ ಮಹಿಳಾ ಸಂಘಟನೆಯ ಉಪಾಧ್ಯಕ್ಷೆ ಶ್ರೀಮತಿ ಎಸ್. ಸತ್ಯಾ ಈ ಗ್ರಾಮ ಪಂಚಾಯಿತಿ, ವಿಶೇಷ ಸಂಚಿಕೆಯನ್ನು ಅತ್ಯಂತ ಪರಿಶ್ರಮದಿಂದ ಮೌಲಿಕವಾಗಿ ಸಂಪಾದಿಸಿಕೊಟ್ಟಿದ್ದಾರೆ. ಅವರ ಈ ವಿಶೇಷ ಕಾಳಜಿಯನ್ನು ಸಂಪಾದಕ ಮಂಡಳಿಯು ಪ್ರೀತಿಪೂರ್ವಕವಾಗಿ ನೆನಪಿಸಿಕೊಂಡು ವಂದನೆಗಳನ್ನು ಸಲ್ಲಿಸುತ್ತದೆ.

*- ಸಂಪಾದಕ ಮಂಡಳಿ*

## ಮೀಸಲಾತಿ ಪ್ರಯತ್ನದ ಮಜಲುಗಳು

ಪಂಚಾಯತ್ ಸಂಸ್ಥೆಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಕುರಿತಾದ ಚಿಂತನೆ ಹಾಗೂ ಚರ್ಚೆ ಪಂಚಾಯತ್ ಸಂಸ್ಥೆಗಳ ಸ್ಥಾಪನೆ ಕುರಿತಾದ ಚಿಂತನೆಯಷ್ಟೇ ಹಳೆಯದು.

ಸ್ವಾತಂತ್ರ್ಯಾನಂತರದಲ್ಲಿ ಗ್ರಾಮೀಣಾಭಿವೃದ್ಧಿಗಾಗಿ ದೇಶವ್ಯಾಪಿ 'ಸಮುದಾಯ ಅಭಿವೃದ್ಧಿ ಯೋಜನೆ'ಯನ್ನು ಬೃಹತ್ ಪ್ರಮಾಣದಲ್ಲಿ ಜಾರಿಗೆ ತರಲು ಯೋಜಿಸಿದಾಗ ಅಂತಹ ಯೋಜನೆಯಲ್ಲಿ ಗ್ರಾಮೀಣ ಜನತೆಯೂ ಸ್ವಯಂ ಪಾಲ್ಗೊಳ್ಳುವ ಅಗತ್ಯ ಕಂಡುಬಂದಿತು. ಸಾರ್ವಜನಿಕರ ಪಾಲ್ಗೊಳ್ಳುವಿಕೆ ಹೆಚ್ಚಿಸುವಂತಹ ಸಾಂಸ್ಥಿಕ ವ್ಯವಸ್ಥೆಯೊಂದನ್ನು ರೂಪಿಸುವ ಅಗತ್ಯವೂ ತೋರಿತು. ಅದಕ್ಕಾಗಿ ಕೇಂದ್ರ ಸರ್ಕಾರ ರಚಿಸಿದ, "ಪಂಚಾಯತ್ ರಾಜ್ ವ್ಯವಸ್ಥೆ ಮತ್ತು ಸಮುದಾಯ ಅಭಿವೃದ್ಧಿ ಅಧ್ಯಯನ ಸಮಿತಿ" ಮೊತ್ತ ಮೊದಲ ಬಾರಿಗೆ ಆಡಳಿತ ವ್ಯವಸ್ಥೆಯಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಕುರಿತಂತೆ ಅಧಿಕೃತವಾಗಿ ಪ್ರತಿಪಾದಿಸಿತ್ತು.

* 1957ರಲ್ಲಿ ರಚನೆಯಾದ, ಬಲವಂತರಾಯ್ ಮೆಹ್ತಾ ಅವರ ನಾಯಕತ್ವದ ಈ ಸಮಿತಿ ಪಂಚಾಯತ್ ಸಂಸ್ಥೆಗಳ ಯಶಸ್ಸಿಗೆ, ಸಮುದಾಯ ಅಭಿವೃದ್ಧಿ ಯೋಜನೆಗಳ ಯಶಸ್ಸಿಗೆ ಅವುಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಅತ್ಯಗತ್ಯ ಎಂದು ಅಭಿಪ್ರಾಯಪಟ್ಟಿತು. "ಸ್ಥಳೀಯ ಸಂಸ್ಥೆಗಳು ನಿಜವಾದ ಅರ್ಥದಲ್ಲಿ ಬಲಗೊಳ್ಳಬೇಕೆಂದರೆ ಆ ಸಂಸ್ಥೆಗಳಿಗೆ ಸಮಾಜ ಕಲ್ಯಾಣ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವ ಇಬ್ಬರು ಮಹಿಳೆಯರನ್ನು ನಾಮಕರಣ ಮಾಡಬೇಕು." ಎಂದು ಸೂಚಿಸಿತು.
* 1975ರ ಮಹಿಳೆಯರ ಸ್ಥಿತಿ-ಗತಿ ಕುರಿತಾದ ರಾಷ್ಟ್ರೀಯ ವರದಿ ಮಹಿಳೆಯರ ರಾಜಕೀಯ ಪ್ರವೇಶಕ್ಕೆ ಹೊಸ ತಿರುವು ನೀಡಿದ ವರದಿ ಎನ್ನಬಹುದು. ಅಂತರ್‌ರಾಷ್ಟ್ರೀಯ ಮಹಿಳಾ ದಶಕದ ಸಂದರ್ಭದಲ್ಲಿ ಬಂದ ಈ ವರದಿ ಮಹಿಳೆಯರ ಮೇಲಿನ ದೌರ್ಜನ್ಯ ತಡೆಗೆ ಅನೇಕ ಕಾಯಿದೆಗಳು ಜಾರಿಗೆ ಬರುವಲ್ಲಿ ನೆರವಾಯಿತು. ಹಾಗೂ, ನೀತಿ ನಿರೂಪಣೆಯ ಸ್ಥಾನಗಳಲ್ಲಿ ಮಹಿಳೆಯರ ಪ್ರಾತಿನಿಧ್ಯ ಹೆಚ್ಚಾಗುವುದರಿಂದ ಮಾತ್ರ ಮಹಿಳೆಯರ ಸ್ಥಾನ-ಮಾನ ಸುಧಾರಿಸುತ್ತದೆ ಎಂದೂ ಪ್ರತಿಪಾದಿಸಿತ್ತು.
* ಇದರ ಬೆನ್ನ ಹಿಂದೆಯೇ ಬಂದ 1978ರ, ಪಂಚಾಯತ್ ವ್ಯವಸ್ಥೆ ಕುರಿತು ಅಧ್ಯಯನ ನಡೆಸಿದ್ದ, ಅಶೋಕ್ ಮೆಹ್ತಾ ವರದಿಯೂ ಬಲವಂತರಾಯ್ ಮೆಹ್ತಾ ವರದಿಯ ಸೂಚನೆಯನ್ನು ಅನುಮೋದಿಸಿತ್ತು. "ಪಂಚಾಯತ್ ಚುನಾವಣೆಗಳಲ್ಲಿ ಅತಿ ಹೆಚ್ಚು ಮತ ಗಳಿಸಿದ ಇಬ್ಬರು ಮಹಿಳೆಯರನ್ನು, ಅಕಸ್ಮಾತ್ ಅವರು ವಿಜೇತರಾಗಿರದಿದ್ದರೂ, ಪಂಚಾಯತ್‌ಗೆ ನಾಮಕರಣ ಮಾಡಿಕೊಳ್ಳಬೇಕು" ಎಂದು ಈ ಸಮಿತಿ ಅಭಿಪ್ರಾಯಪಟ್ಟಿತ್ತು.

ಇಂತಹ ನಾಮಕರಣವನ್ನು ವಿರೋಧಿಸಿದ ಮಹಿಳಾ ಸಂಘಟನೆಗಳು, ನಾಮಕರಣದ ಬದಲು ಚುನಾವಣೆಯಲ್ಲಿ ಸ್ಪರ್ಧಿಸಲು ಮೀಸಲಾತಿ ಕಲ್ಪಿಸಬೇಕೆಂದು ಆಗ್ರಹಪಡಿಸಿದ್ದವು.

* ಪಂಚಾಯತ್ ವ್ಯವಸ್ಥೆಯಲ್ಲಿ ಮಹಿಳೆಗೆ ಶಾಸನಬದ್ಧ ಮೀಸಲಾತಿ ನೀಡುವ ಕ್ರಾಂತಿಕಾರಿ ಪ್ರಯತ್ನ ಮೊದಲು ನಡೆದಿದ್ದು ಕರ್ನಾಟಕದಲ್ಲೇ. 1983ರಲ್ಲಿ ಜನತಾದಳ ಸರ್ಕಾರ ಜಾರಿಗೆ ತಂದ ಪಂಚಾಯತ್ ರಾಜ್ ತಿದ್ದುಪಡಿ ಮಸೂದೆ ಮಹಿಳೆಯರಿಗೆ 25% ಮೀಸಲಾತಿ ನೀಡಿತ್ತು. ಇದು 1987ರ ಚುನಾವಣೆಯಲ್ಲಿ ಜಾರಿಗೆ ಬಂದಾಗ ದೇಶದಲ್ಲೇ ಮೊದಲ ಬಾರಿಗೆ ನೂರಾರು ಮಹಿಳೆಯರು ಪಂಚಾಯತ್‌ಗಳಿಗೆ ಆಯ್ಕೆಯಾಗಿ ಬಂದರು.
* 1988ರ ಮಹಿಳೆಯರನ್ನು ಕುರಿತಾದ "ರಾಷ್ಟ್ರೀಯ ದೃಷ್ಟಿಕೋನ ಯೋಜನೆ" (National peripective plan on women) ಆಡಳಿತ ವ್ಯವಸ್ಥೆಯ ಎಲ್ಲ ಸ್ತರಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಹೆಚ್ಚಾಗುವುದರ ಅಗತ್ಯವನ್ನು ಪುನರ್ ಪ್ರತಿಪಾದಿಸಿತು. ಪಂಚಾಯತ್ ಸಂಸ್ಥೆಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಯ ಉದಾಹರಣೆಯ ಬುನಾದಿಯ ಮೇಲೆ, ಪಂಚಾಯತ್‌ನಿಂದ ಹಿಡಿದು ಲೋಕಸಭೆಯವರೆಗೆ ಎಲ್ಲ ಚುನಾಯಿತ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಮೂರನೇ ಒಂದು ಭಾಗ ಮೀಸಲಾತಿ ನೀಡಬೇಕೆಂದು ಒತ್ತಿ ಹೇಳಿತು.
* 1978ರಿಂದಲೂ ಯಶಸ್ವಿ ಪಂಚಾಯತ್ ವ್ಯವಸ್ಥೆಯನ್ನು ರೂಢಿಸಿಕೊಂಡು ಬಂದಿದ್ದ ಪಶ್ಚಿಮ ಬಂಗಾಳ ಸರ್ಕಾರ

1992ರಲ್ಲಿ ಮಹಿಳೆಯರಿಗೆ ಮೂರನೇ ಒಂದು ಭಾಗ ಮೀಸಲಾತಿ ನೀಡಿ ದೇಶಕ್ಕೇ ಮಾದರಿಯಾಯಿತು.

* ಈ ಮಧ್ಯೆ ರಾಜೀವ್‌ಗಾಂಧಿ ನೇತೃತ್ವದ ಕೇಂದ್ರ ಸರ್ಕಾರ 1989ರಲ್ಲಿ ಎಲ್.ಎಂ. ಸಿಂಘ್ವಿ ಸಮಿತಿಯ ಶಿಫಾರಸ್ಸುಗಳ ಆಧಾರದ ಮೇಲೆ ಪಂಚಾಯತ್ ವ್ಯವಸ್ಥೆಯನ್ನ ಸಂವಿಧಾನಬದ್ಧಗೊಳಿಸುವಂತಹ ಮಹತ್ತರ ತಿದ್ದುಪಡಿ ಮಸೂದೆಯೊಂದನ್ನು ರೂಪಿಸಿತು. ಇದರಲ್ಲಿ ಮಹಿಳೆಯರಿಗೆ ಮೂರನೇ ಒಂದು ಭಾಗ ಮೀಸಲಾತಿ ನೀಡಬೇಕೆಂಬ ಪ್ರಸ್ತಾವನೆಯೂ ಇತ್ತು. ಹಲವು ಇತರೆ ಅಡೆ-ತಡೆಗಳ ನಂತರ 1993ರ ಏಪ್ರಿಲ್‌ನಲ್ಲಿ ಜಾರಿಗೆ ಬಂದ '73ನೇ ಸಂವಿಧಾನ ತಿದ್ದುಪಡಿ ಮಸೂದೆ' ಎಂದು ಕರೆಯಲ್ಪಡುವ ಈ ಮಸೂದೆ ಎಲ್ಲ ರಾಜ್ಯಗಳಲ್ಲಿ ಏಕರೂಪ ಮೀಸಲಾತಿಯನ್ನು ಜಾರಿಗೆ ತಂದಿತು.

ಇದರ ಫಲವಾಗಿ ಇಂದು ದೇಶದಾದ್ಯಂತ ಒಂದು ಮಿಲಿಯನ್ ಮಹಿಳೆಯರು ಗ್ರಾಮಪಂಚಾಯತ್, ತಾಲ್ಲೂಕು ಪಂಚಾಯತ್ ಹಾಗೂ ಜಿಲ್ಲಾ ಪಂಚಾಯತ್‌ಗಳಲ್ಲಿ ಅಧಿಕಾರದ ಸೂತ್ರ ಹಿಡಿದಿದ್ದಾರೆ.

"ಮಹಿಳೆಯರಿಗೆ ಪ್ರತಿಶತ 33ರಷ್ಟು ಮೀಸಲಾತಿ ನೀಡಿರುವುದಲ್ಲದೆ ಈ ಮಸೂದೆಯಲ್ಲಿರುವ ಮತ್ತೊಂದು ಪ್ರಗತಿಪರ ಅಂಶವೆಂದರೆ ಮೊತ್ತ ಮೊದಲ ಬಾರಿಗೆ ಸರ್ಕಾರಿ ಕಡತವೊಂದರಲ್ಲಿ ಲಿಂಗಸೂಚಕವಲ್ಲದ 'chairperson' ಎನ್ನುವ ನಾಮಪದದ ಬಳಕೆ" ಎನ್ನುತ್ತಾರೆ ನೀನಾ ಭಂಡಾರಿ

*(ಡೆಕ್ಕನ್ ಹೆರಾಲ್ಡ್)*

---

ಪುಸ್ತಕ ಪರಿಚಯ

## ಮಾನಸಿ-ಮಾನಸ (ಲೇಖನಗಳ ಸಂಗ್ರಹ)

ಲೇ: ಡಾ. ಚಂದ್ರಮತಿ ಸೋಂದಾ
ಪ್ರ: ಚಿಂತನ ಪ್ರಕಾಶನ: 551/S 24ನೇ ಕ್ರಾಸ್.
ಹೆಬ್ಬಾಳ ಎರಡನೆ ಹಂತ, ಹಿನಕಲ್ ಅಂಚೆ, ಮೈಸೂರು.
ಪುಟಗಳು: 12+122, ಬೆಲೆ: ರೂ.30/-

'ಮಾನಸಿ-ಮಾನಸ'ವು ಡಾ. ಚಂದ್ರಮತಿ ಸೋಂದಾ ಅವರ ಹತ್ತು ಪ್ರಕಟಿತ ಲೇಖನಗಳ ಸಂಗ್ರಹ. ಸುಮಾರು 88 ರಿಂದ 97ರವರೆಗೆ, ಹತ್ತು ವರ್ಷಗಳಲ್ಲಿ ಅಲ್ಲಲ್ಲಿ ಪ್ರಕಟಿಸಿದ ಲೇಖನಗಳನ್ನು ಒಂದೆಡೆ ತರಲಾಗಿದೆ. ಎಂ.ಕೆ. ಇಂದಿರಾ ಅವರ ಪರಿಚಯ, ವಾಣಿಯವರ ಸಾಹಿತ್ಯಿಕ ಪರಿಚಯ, ಜಯಲಕ್ಷ್ಮಿಯವರ ಕಥನಲೋಕದ ಅವಲೋಕನ, ಚಿ.ನ. ಮಂಗಳ ಅವರ ಸ್ಮರಣೆ, ಜನಪದ ತ್ರಿಪದಿಗಳಲ್ಲಿ ಹೆಣ್ಣು, ಎಂಭತ್ತರ ದಶಕದ ಮಹಿಳಾ ಕಾವ್ಯ, ಸಮೂಹ ಮಾಧ್ಯಮ ಮತ್ತು ಮಹಿಳೆ, ಅನಂತಮೂರ್ತಿಯವರ ಕಥಾ ಸಾಹಿತ್ಯ - ಒಂದು ಸ್ತ್ರೀವಾದಿ ವಿಶ್ಲೇಷಣೆ, ಅತ್ಯಾಚಾರಕ್ಕೆ ಸಂಬಂಧಿಸಿದ ಕತೆಗಳು - ಕೆಲವು ಟಿಪ್ಪಣಿಗಳು ಹಾಗೂ ಸ್ತ್ರೀ ವಿಶಿಷ್ಟ ಕೃತಿಗಳಾಗಿ ಸೀತೆ-ರಾಮ-ರಾವಣ ಮತ್ತು ವಿಮುಕ್ತಿ - ಈ ಲೇಖನಗಳ ಮೂಲಕ ಲೇಖಕಿಯು ಕಿರು ಸಮೀಕ್ಷೆಯ ಜೊತೆಜೊತೆಗೆ ವಿಮರ್ಶಾತ್ಮಕ ಅಭಿಪ್ರಾಯಗಳನ್ನು ಸೇರಿಸಿದ್ದಾರೆ. ಕೆಲವು ಲೇಖನಗಳು ಗಮನಾರ್ಹವಾಗಿವೆ. ಎಚ್.ವಿ. ಸಾವಿತ್ರಮ್ಮನವರ 'ಸೀತೆ ರಾಮ ರಾವಣ' ಕೃತಿ ವಿಮರ್ಶೆ, ಅನಂತ ಮೂರ್ತಿಯವರ ಕೃತಿಗಳಲ್ಲಿ ಕಂಡುಬರುವ ಸ್ತ್ರೀ ದೃಷ್ಟಿಕೋನ ಹಾಗೂ ಸಮೂಹ ಮಾಧ್ಯಮ ಮತ್ತು ಮಹಿಳೆ ಗಮನ ಸೆಳೆಯುವ ಲೇಖನಗಳಾಗಿವೆ. ಡಾ. ಸೋಂದಾ ಅವರಲ್ಲಿ ಉತ್ತಮ ಅಧ್ಯಯನಶೀಲತೆಯನ್ನು ನಾವು ಕಾಣಬಹುದಾಗಿದೆ. ಇದರಿಂದ ಅವರು ಇನ್ನಷ್ಟು ಚಿಂತನಶೀಲ ಲೇಖನಗಳನ್ನು ನೀಡುವ ಭರವಸೆಯನ್ನು ಮೂಡಿಸುತ್ತಾರೆ.

- ದೇವಿ

## ನಾರಿ-ದಾರಿ-ದಿಗಂತ : ಒಂದು ಪರಿಚಯ

- ಗೀತಾ ಡಿ.ಸಿ.

ಲೇ: ವಿಜಯಾದಬ್ಬೆ
ಪ್ರ: ರಚನಾ ಪ್ರಕಾಶನ, ಮೈಸೂರು
ಬೆಲೆ: 50, ಪುಟ: 182

ಸ್ತ್ರೀವಾದದ ಪ್ರಮುಖ ಚಿಂತಕಿಯರಲ್ಲಿ ಒಬ್ಬರಾದ ವಿಜಯಾದಬ್ಬೆಯವರು ಬೇರೆ ಬೇರೆ ಸಂದರ್ಭಗಳಲ್ಲಿ ಮಾಡಿದ ಮಹಿಳಾ ವಿಷಯಕವಾದ ಭಾಷಣಗಳ/ಲೇಖನಗಳನ್ನೊಳಗೊಂಡ ಕೃತಿಯಿದು.

ಭಾರತೀಯ ಸಾಮಾಜಿಕ ಸನ್ನಿವೇಶದಲ್ಲಿ ಹೆಣ್ಣಿನ ದಾರಿ-ದಿಗಂತವನ್ನು ಈ ನೆಲದ ಹೆಣ್ಣಾಗಿ ಮಾನವೀಯ ದೃಷ್ಟಿಕೋನದಿಂದಲೇ ನೋಡುವ ಇಲ್ಲಿನ ಲೇಖನಗಳೆಲ್ಲವೂ ಓದುಗರ ಮೆಚ್ಚಿಗೆಯನ್ನು ಪಡೆದುಕೊಳ್ಳುತ್ತವೆ. ಪಶ್ಚಿಮ ಸ್ತ್ರೀವಾದದ ನಿರಾಕರಣೆ, ಅಂಧಾನುಕರಣೆ ಎರಡೂ ಮಾರಕವೆಂದು ಹೇಳುತ್ತ ಸಂಪೂರ್ಣವಾಗಿ "ಭಾರತೀಯ ಸ್ತ್ರೀವಾದವನ್ನು ಗ್ರಹಿಸದೆ, ತೋರಿಕೆಗೆ ಮಾತ್ರ ಪಶ್ಚಿಮವನ್ನು ನಿರಾಕರಿಸಿ ಕೂಪಮಂಡೂಕಗಳಾಗಿ ಸ್ತ್ರೀವಾದವನ್ನು ಸರಿಯಾಗಿ ಗ್ರಹಿಸಿದವರ ಬಗ್ಗೆ ವಿಷಾದ ವ್ಯಕ್ತಪಡಿಸುತ್ತಲೇ ಭಾರತೀಯ ಸ್ತ್ರೀವಾದವನ್ನು ಕುರಿತು ಹೀಗೆ ಹೇಳುತ್ತಾರೆ: "ಭಾರತೀಯ ಸ್ತ್ರೀವಾದ ರೂಪುಗೊಳ್ಳುವುದು ಅಥವಾ ಅದರ ಹೊಳಹುಗಳು ಹೊಮ್ಮುವುದು ಇತಿಹಾಸದ ಬೆಳಕಿನಿಂದ ವರ್ತಮಾನದ ಸಮಗ್ರತೆಯನ್ನು ಗ್ರಹಿಸುವ ಭವಿಷ್ಯತ್ತಿನ ಬೆಳಕಿನೆಳೆಗಳನ್ನು ಕಾಣಬಲ್ಲ ಸೂಕ್ಷ್ಮವೂ ವ್ಯಾಪಕವೂ ಆದ ಸೃಜನಶೀಲತೆಯಲ್ಲಿ, ದಾರ್ಶನಿಕತೆಯಲ್ಲಿ. ಅದು ಒಂದು ಯುಗದ ಮಥನದ ನವನೀತ, ಹಲವು ಕ್ಷೇತ್ರಗಳ ಪರಿಣತಿ, ಸಂವೇದನೆ, ಶಕ್ತಿಗಳ ಫಲ." ಈ ಕೃತಿಯಲ್ಲಿನ ಲೇಖನಗಳ ಒಟ್ಟು ಗ್ರಹಿಕೆಯೂ ಇದೇ ಆಗಿದೆ.

ಇದರಲ್ಲಿ ಒಟ್ಟು ಇಪ್ಪತ್ತು ಲೇಖನಗಳಿವೆ. ಇಲ್ಲಿನ ವಿಚಾರಗಳೆಲ್ಲವೂ ಎಲ್ಲ ಕ್ಷೇತ್ರಗಳಲ್ಲೂ ಆರಂಭದಿಂದ ಮಹಿಳೆ ಎದುರಿಸಬೇಕಾಗಿ ಬಂದ ಸಮಸ್ಯೆಗಳು, ಅದಕ್ಕೆ ಕಾರಣಗಳು ಮತ್ತು ಪರಿಹಾರೋಪಾಯಗಳನ್ನು ಕುರಿತದ್ದಾಗಿವೆ.

ಸ್ತ್ರೀದನಿಯೆತ್ತುವ ಪುರುಷರ, ಪುರುಷಕೇಂದ್ರಿತ ಪ್ರಜ್ಞೆಯುಳ್ಳ ಸ್ತ್ರೀಯರ ಒಟ್ಟು ಗ್ರಹಿಕೆ ಬೆಳೆದು ಬಂದಿದ್ದನ್ನ ಲಿಂಗ, ಜಾತಿ, ವರ್ಗಗಳ ಹಿನ್ನೆಲೆಯಲ್ಲಿ ಸ್ತ್ರೀವಾದಿ ಪ್ರಜ್ಞೆಯ ಕಾಳಜಿಗಳನ್ನು ಮತ್ತು ಸ್ತ್ರೀವಾದಿ ವಿಮರ್ಶೆಯು ಪುರುಷ ಶ್ರೇಷ್ಠತೆಯ ಸಾಹಿತ್ಯದಲ್ಲಿ ಸ್ಥಾಪಿತವಾದ ಬಗೆ, ಬೆಳೆದು ಬಂದ ರೀತಿ, ಅದರ ವಿರುದ್ಧ ಹೋರಾಡಬೇಕಾಗಿ ಬಂದ ಅನಿವಾರ್ಯತೆ, ಈಗೀಗ ಕನ್ನಡದಲ್ಲಿ ಸ್ತ್ರೀವಾದಿ ವಿಮರ್ಶೆ ಚಿಗುರೊಡೆದು ಗಟ್ಟಿಯಾಗುತ್ತಿರುವುದೆಲ್ಲವನ್ನು ದೀರ್ಘವಾಗಿ 'ಸ್ತ್ರೀವಾದ ಮತ್ತು ಸ್ತ್ರೀವಾದಿ ವಿಮರ್ಶೆ' ಲೇಖನದಲ್ಲಿ ಚರ್ಚಿಸಿದ್ದಾರೆ.

ಸ್ತ್ರೀಗೆ ಅಗತ್ಯವೂ ಅನಿವಾರ್ಯವೂ ಆದ ಸಬಲೀಕರಣಕ್ಕಾಗಿ ನ್ಯಾಯಾಂಗ ವ್ಯವಸ್ಥೆಯು ಏನೇನು ಮಾಡುತ್ತಿದೆಯೆಂಬುದರ ಸಂಕ್ಷಿಪ್ತ ನೋಟ: 'ಮಹಿಳಾ ಸಬಲೀಕರಣ ಮತ್ತು ನ್ಯಾಯಾಂಗ'. 22.9.94ರಂದು ಎಂ.ಕೆ. ನಂಬಿಯಾರ್ ಟ್ರಸ್ಟ್ ರಾಷ್ಟ್ರೀಯ ಕಾನೂನು ವಿದ್ಯಾಲಯ ಮತ್ತು ಅಮೆರಿಕದ ಮಾಹಿತಿ ಸೇವಾಸಂಸ್ಥೆಯು ಜಂಟಿಯಾಗಿ ಮೈಸೂರಿನಲ್ಲಿ ನಡೆಸಿದ ಚರ್ಚೆಯಿದು.

ಲಿಂಗವ್ಯವಸ್ಥೆಯ ಕುರುಡುತನದಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶದ ಮಹಿಳೆ ಎದುರಿಸಬೇಕಾದ ಹೊಸಹೊಸ ಸಮಸ್ಯೆಗಳು, ಸವಾಲುಗಳನ್ನು ಕುರಿತು ಚಿಂತಿಸುವ ಲೇಖನ 'ವಿಮೋಚನೆಯೂ, ಆಲೋಚನೆಯೂ.' ಈ ಮೂಲಕ ವಿಜಯಾ ಅವರು ಲಿಂಗವ್ಯವಸ್ಥೆಯ ಕುರುಡುತನವನ್ನು ಹೋಗಲಾಡಿಸಿ, ನ್ಯಾಯವನ್ನು ಸ್ಥಾಪಿಸುವುದು ಮತ್ತು ವೈಚಾರಿಕ ಆಂದೋಲನವನ್ನು ಬಲಗೊಳಿಸುವುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆಯೆಂಬುದನ್ನು ನೆನಪಿಸುತ್ತಾರೆ.

ಹೆಣ್ಣು ಮಕ್ಕಳನ್ನು ಹುಟ್ಟಿನಿಂದಲೇ ಬೆಳೆಸುವ ರೀತಿ, ಪೀಳಿಗೆಯಿಂದ ಪೀಳಿಗೆಗೆ ಮುಂದುವರಿಯುವ ಅವಳ ಪಾಡು, ಶಿಕ್ಷಣ, ಉದ್ಯೋಗ, ಆರೋಗ್ಯ ಹಾಗೂ ಹಿಂಸೆಯಿಂದ ರಕ್ಷಣೆಯಿಲ್ಲದ ಮಹಿಳೆಯರ - ಅದರಲ್ಲೂ ಗ್ರಾಮೀಣ ಮಹಿಳೆಯರ - ಸ್ಥಿತಿಯನ್ನು ಹೇಳುತ್ತಲೇ ಅದರಿಂದಾಚೆಗೆ ಬರುವಂತೆ ಒತ್ತಾಯಿಸಿ, ಪ್ರೋತ್ಸಾಹಿಸುತ್ತಾರೆ ಕೂಡ. ಮಹಿಳೆಯರು ಎಂದೂ ದುರ್ಬಲರಲ್ಲವೆಂದು ಧೈರ್ಯ ತುಂಬುವುದರೊಂದಿಗೇ, ಅವರು ಒಬ್ಬರಿಗೊಬ್ಬರು ಪೂರಕವಾಗಿ ನಿಂತು ಸಹಕರಿಸಿದಾಗ ಮಾತ್ರ ಇಡೀ ಸಮಾಜ ಆರೋಗ್ಯವಾಗಿರುತ್ತದೆಂಬ ಕಿವಿಮಾತನ್ನೂ ಹೇಳಿದ್ದಾರೆ. -

'ಭವತಾರಿಣಿಯ ಭವ'ದಲ್ಲಿ-

ಮೀಸಲಾತಿಯ ಮೂಲಕ ಬಂದ ಮಹಿಳೆಯರು ಸಮರ್ಪಕವಾಗಿ ನಿರ್ವಹಿಸಬೇಕಾದ ಜವಾಬ್ದಾರಿ. ಅವರಿಗೆ ಪುರುಷರ ಬೆಂಬಲ, ಸಹಕಾರದ ಅಗತ್ಯವನ್ನು ಕುರಿತು ಚಿಂತಿಸುವುದು: 'ಮಹಿಳೆಯರಿಗೆ ರಾಜಕೀಯ ಮೀಸಲಾತಿ'. ಒಳ್ಳೆಯ ಸಮಾಜ ರೂಪುಗೊಳ್ಳಲು ಮಹಿಳೆ-ಪುರುಷರಿಬ್ಬರ ಪರಸ್ಪರ ಗೌರವ, ನಂಬಿಕೆಗಳು ಅಗತ್ಯವೆನ್ನುವ ವಿಜಯಾ ಅವರು ಎಲ್ಲ ಜಾತಿಯ ಮಹಿಳೆಯರಿಗೂ ರಾಜಕೀಯ ಮೀಸಲಾತಿಯಲ್ಲಿ ಅವಕಾಶ ದಕ್ಕಬೇಕು. ಉಳಿದವರು ಅವರಿಗೆ ಸಹಕರಿಸಬೇಕೆಂದು ಹೇಳುವುದನ್ನು ಮರೆಯುವುದಿಲ್ಲ.

ಹಲವು ಧರ್ಮಗಳನ್ನೊಳಗೊಂಡ ಭಾರತದಲ್ಲಿ ಸಮಾನ ನಾಗರಿಕ ಸಂಹಿತೆ ಹೇಗೆ ಫಲಕಾರಿಯಾಗಿಲ್ಲವೆಂಬುದರ ಬೇರೆ ಬೇರೆ ವರದಿಗಳನ್ನೊಳಗೊಂಡ ಲೇಖನ, 'ವೈಯಕ್ತಿಕ ಕಾನೂನಿನ ಸುಳಿಯಲ್ಲಿ ಮಹಿಳೆ'. ಮಹಿಳೆಗೆ ಒಂದು ಕಾನೂನಿನ ಅಗತ್ಯವಿದೆ. ತನ್ನ ಹಕ್ಕಿಗಾಗಿ ಹೋರಾಡಲಾದರೂ ಅದರ ಅವಶ್ಯಕತೆಯಿದ್ದೇ ಇದೆ. ಕಾನೂನುಗಳಿದ್ದರೂ ಅವು ಲಿಂಗವ್ಯವಸ್ಥೆಯ ಅಸಮಾನತೆಯನ್ನು ಹೊಂದಿವೆಯಾದ್ದರಿಂದ ಸಮಾನ ನಾಗರಿಕ ಸಂಹಿತೆ ಹೆಸರಿಗೆ ಮಾತ್ರವಾಗಿದೆ. ನಮ್ಮ ಧಾರ್ಮಿಕ ಮುಖಂಡರು, ಹಲವಾರು ಸಂಘಟನೆಗಳು, ನಮ್ಮ ಸರ್ಕಾರಗಳು, ಪಕ್ಷಗಳು ತಮ್ಮ ಅಧಿಕಾರ ಶಕ್ತಿಗಳಾಗಿ ಉದ್ದಕ್ಕೂ ಮಹಿಳೆಯರನ್ನು ಬಲಿಕೊಡುವುದೇ ಆಗಿದೆಯೆಂಬುದನ್ನು ಈ ಲೇಖನ ಒತ್ತಿ ಹೇಳುತ್ತದೆ.

ಮಹಿಳಾ ಪತ್ರಿಕೆಗಳ ಮತ್ತು ಮಹಿಳಾ ಚಳುವಳಿಯ ಬೆಳವಣಿಗೆಗೆ ಕಾರಣವಾದ ಪತ್ರಿಕೋದ್ಯಮ, ಪುರುಷ ಮತ್ತು ಪುರುಷಕೇಂದ್ರಿತ ದೃಷ್ಟಿಕೋನವುಳ್ಳ ನಮ್ಮ ಸಂಸ್ಕೃತಿಯಲ್ಲಿ ಮಹಿಳೆರಿಗೆ ಸದಾ ಅನ್ಯಾಯ, ಮಹಿಳಾ ಚಳುವಳಿಯಲ್ಲಿರುವವರನ್ನು ಮತ್ತು ಮಹಿಳಾ ಗುಂಪುಗಳನ್ನು ಪತ್ರಿಕೆಗಳು ಸ್ವೀಕರಿಸುವ ಬಗೆ - ಇವುಗಳನ್ನು ಕುರಿತ ಚರ್ಚೆ 'ಪತ್ರಿಕೋದ್ಯಮ ಮತ್ತು ಮಹಿಳಾ ಚಳುವಳಿ'.

ಈ ಲೇಖನಗಳೊಂದಿಗೇ ವ್ಯಕ್ತಿತ್ವದ ಉನ್ನತಿಯಲ್ಲಿ, ವಚನಗಳ ಶ್ರೇಷ್ಠತೆಯಲ್ಲಿ ಅನುಭಾವಿಕ ಎತ್ತರಕ್ಕೇರಿದ ಅಕ್ಕ, ದಕ್ಷಿಣ ಕನ್ನಡ ಮೂಲದ, ಏಳು ದಶಕಗಳ ಕಾಲ ಜೀವನ ಹೋರಾಟವನ್ನು ಮಾಡಿದ ವಾಸಂತಿಬಾಯಿ ಪಡುಕೋಣೆ, ಆಧುನಿಕ ಕನ್ನಡದ ಮೊದಲ ಕಾದಂಬರಿಕಾರ್ತಿಯೆಂದು ಗುರುತಿಸಲಾಗಿರುವ ಶಾಂತಾಬಾಯಿ ನೀಲಗಾರ, ನಿಜವಾದ ಸೌಂದರ್ಯದ ಒಳಗುಟ್ಟನ್ನು ತಿಳಿಸುವ ವಿಶ್ವಸುಂದರಿಯರು - ಇವರೆಲ್ಲರ ಮತ್ತು ಜನಪದ ಸಾಹಿತ್ಯದ ಸ್ತ್ರೀಯ ನಲಿವು, ನೋವು ಅವರ ಗೀತೆಗಳ ಮೂಲಕ ಹರಿದದ್ದರ ಪರಿಚಯದೊಂದಿಗೇ ಕಪ್ಪು ಸ್ತ್ರೀವಾದಿ ವಿಮರ್ಶೆ, ಮಧ್ಯಯುಗೀನ ಭಾರತೀಯ ಮಹಿಳೆಯ ಕೆಲವು ವಿಚಾರಗಳು ಹಾಗೂ ಆಧುನಿಕ ಪೂರ್ವ ಕನ್ನಡ ಸಾಹಿತ್ಯದಲ್ಲಿನ ಸ್ತ್ರೀದನಿಯನ್ನು ಕುರಿತೂ ವಿಜಯಾ ಅವರು ಚರ್ಚಿಸಿದ್ದಾರೆ.

ಎಲ್ಲಕ್ಕಿಂತ ಹೆಚ್ಚಾಗಿ ಹೆಣ್ಣಿನ ವಿರುದ್ಧ ಹೆಣ್ಣನ್ನೇ ಎತ್ತಿಕಟ್ಟುವ ನಮ್ಮ ವರ್ಗ, ಜಾತಿ ವ್ಯವಸ್ಥೆಯು ಕೆಲಸ ಮಾಡುವ ರೀತಿಯನ್ನು 'ಹೆಣ್ಣಿಗೆ ಹೆಣ್ಣೇ ಶತ್ರುವೇ?' ಲೇಖನದಲ್ಲಿ ಪ್ರಸ್ತಾಪಿಸಿ ಜನಪದ ಸಾಹಿತ್ಯದಲ್ಲಿ ದೊರೆಯುವ ಸಾಕಷ್ಟು ಉದಾಹರಣೆಗಳನ್ನು ಕೊಡುತ್ತಾರೆ. ಮಾತ್ರವಲ್ಲ, ಈ ವ್ಯವಸ್ಥೆಯ ದಿಕ್ಕು ಬದಲಾಗಬೇಕು. ಅದಕ್ಕೆ ನಮ್ಮೆಲ್ಲರ ಚಿಂತನೆ ಅತ್ಯಗತ್ಯವೆಂದೂ ಎಚ್ಚರಿಸುತ್ತಾರೆ.

ಒಟ್ಟಾರೆಯಾಗಿ ಹೇಳುವುದಾದರೆ, ಕುಟುಂಬ, ರಾಜಕೀಯ, ಪತ್ರಿಕೋದ್ಯಮ, ನ್ಯಾಯಾಂಗ, ಮೀಸಲಾತಿ - ಹೀಗೆ ಎಲ್ಲ ಕ್ಷೇತ್ರಗಳಲ್ಲಿ ಮಹಿಳೆಗಿರುವ ಸ್ಥಾನಮಾನ, ಇವಾಗಿವೆ. ವಿಜಯಾದಬ್ಬೆಯವರೇ ಹೇಳುವಂತೆ, 'ಲಿಂಗವ್ಯವಸ್ಥೆಯೇ ಈ ಎಲ್ಲ ಬರಹಗಳ ಕೇಂದ್ರವಾದ್ದರಿಂದ ವಿಷಯಗಳು ಒಮ್ಮೊಮ್ಮೆ ಮರುಕಳಿಸಿವೆ' ಎನಿಸಿದರೂ ಅದರ ಅಗತ್ಯವಿದೆ ಎನಿಸಿಬಿಡುತ್ತದೆ. ಮತ್ತೆ ಮತ್ತೆ ಈ ವಿಚಾರಗಳನ್ನು ಪ್ರಸ್ತಾಪಿಸುವುದರಿಂದ, ಜಡಗೊಂಡ ಸಮಾಜವನ್ನು ಜಾಗೃತಿಗೊಳಿಸಲು, ಕಿವಿಮಾತು ಹೇಳುವ ಮತ್ತು ಕಿವಿ ಹಿಂಡಿ ಹೇಳುವ ಕೆಲಸವನ್ನು ಮಾಡುತ್ತಿದ್ದಾರೆನಿಸುತ್ತದೆಯೇ ಹೊರತು ಚರ್ವಿತಚರ್ವಣವೆನಿಸುವುದಿಲ್ಲ.

'ಜೀವನ ಪರತೆಯಲ್ಲಿ ಸಾಮೂಹಿಕ ಸಖ್ಯದಲ್ಲಿ ಬೇರೂರಿರುವ ಮಹಿಳಾ ವಾದ ನಮ್ಮ ನಾಳೆಗಳನ್ನು ಸಹ್ಯವಾಗಿಸಬೇಕಾಗಿದೆ, ಸುಂದರವಾಗಿಸಬೇಕಾಗಿದೆ''. ಎಂಬುದೇ ಲೇಖಕಿಯ ಆಶಯವಾಗಿದೆ. ಅವರ ಈ ಪ್ರಯತ್ನದ ಸಾಗರದ ಕೆಲವು ಬಿಂದುಗಳೊಂದಿಗೆ ಇನ್ನಾದರೂ ಕೆಲವು ಬಿಂದುಗಳನ್ನ ನಾವೂ ಸೇರಿಸೋಣ.

ವರದಿ

# ಪಂಚಾಯತ್‌ರಾಜ್ ಮಸೂದೆಗೆ ತಿದ್ದುಪಡಿ ಬೇಕೇ ?

ಶಾಂತಾ,
ಮದ್ರಾಸು

ಇನ್‌ಸ್ಟಿಟ್ಯೂಟ್ ಆಫ್ ಸೋಷಿಯಲ್ ಸೈನ್ಸ್ ಮತ್ತು ಕರ್ನಾಟಕದ ಪಂಚಾಯತ್‌ರಾಜ್ ಮತ್ತು ಗ್ರಾಮೀಣ ಅಭಿವೃದ್ಧಿಯ ಇಲಾಖೆಗಳೆರಡೂ ಸಂಯುಕ್ತವಾಗಿ ರಾಷ್ಟ್ರೀಯ ಸಮಾವೇಶವೊಂದನ್ನು ಬೆಂಗಳೂರಿನಲ್ಲಿ ಜನವರಿ 4 ಮತ್ತು 5ರಂದು ನಡೆಸಿದವು. ಈ ಸಮಾವೇಶದ ಮುಖ್ಯ ವಿಷಯ. ಸಂವಿಧಾನದ 73 ಮತ್ತು 74ನೆಯ ವಿಧಿಯ ತಿದ್ದುಪಡಿಗೆ ಮತ್ತಷ್ಟು ಬದಲಾವಣೆಯನ್ನು ತರುವ ಅಗತ್ಯವನ್ನು ಕುರಿತಂತೆ ಚರ್ಚಿಸುವುದೇ ಆಗಿತ್ತು. ದೇಶದ ಸುಮಾರು ಎಲ್ಲಾ ರಾಜ್ಯಗಳನ್ನು ಪ್ರತಿನಿಧಿಸುವ 81 ಪ್ರತಿನಿಧಿಗಳು ಮತ್ತು ಒರಿಸ್ಸಾ ರಾಜ್ಯದಿಂದ 20 ಚುನಾಯಿತ ಗ್ರಾಮಪಂಚಾಯಿತಯ ಸದಸ್ಯರ ತಂಡವೊಂದು ಈ ಸಮಾವೇಶದಲ್ಲಿ ಭಾಗಿಯಾಗಿದ್ದವು.

ಈ ಸಮಾವೇಶವನ್ನೂ ಕರ್ನಾಟಕದ ಮುಖ್ಯಮಂತ್ರಿಗಳಾದ ಶ್ರೀ ಜೆ.ಎಚ್.ಪಟೇಲರು ಉದ್ಘಾಟಿಸಿದರು. ಕರ್ನಾಟಕದ ಪಂಚಾಯತ್‌ರಾಜ್ ಮಂತ್ರಿಯಾದ ಶ್ರಿ ಎಂ.ಪಿ. ಪ್ರಕಾಶ್. ಕೇಂದ್ರದ ಗ್ರಾಮೀಣಭಿವೃದ್ಧಿ ಮತ್ತು ಉದ್ಯೋಗ ಇಲಾಖೆಯ ಕೇಂದ್ರ ಸಚಿವರಾದ ಶ್ರೀ ಬಾಬಾಗೌಡ ಪಾಟೀಲ, ಪಶ್ಚಿಮ ಬಂಗಾಳ ಸರ್ಕಾರದ ಪಂಚಾಯತ್‌ರಾಜ್ ಮತ್ತು ಗ್ರಾಮೀಣಾಭಿವೃದ್ಧಿ ಸಚಿವರಾದ ಡಾ. ಸೂರ್ಯಕಾಂತ ಮಿಶ್ರಾರವರು ಈ ಸಂದರ್ಭದಲ್ಲಿ ವಿಶೇಷ ಅತಿಥಿಗಳಾಗಿ ಭಾಗವಹಿಸಿದ್ದರು.

ಈ ಸಮಾವೇಶದಲ್ಲಿ ಪ್ರತಿನಿಧಿಗಳನ್ನು ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಸಂಬಂಧಿಸಿದಂತೆ ಅವರವರ ಆಸಕ್ತಿ ಮತ್ತು ಕಾಳಜಿಗನುಗುಣವಾಗಿ ಐದು ಕ್ರಿಯಾತಂಡಗಳಾಗಿ ವಿಂಗಡಿಸಲಾಗಿದ್ದವು.

1. ಗ್ರಾಮ ಸಭಾ
2. ಪಂಚಾಯತ್‌ಗಳ ರಚನೆ
3. ಅಧಿಕಾರ ಮತ್ತು ಕಾರ್ಯರೀತಿಗಳ
4. ಯೋಜನೆಗಳು ಮತ್ತು ಸಿಬ್ಬಂದಿ
5. 74ನೇ ವಿಧಿಯ ತಿದ್ದುಪಡಿ.

ಗ್ರಾಮಸಭಾಗಳಿಗೆ ಸಂಬಂಧಪಟ್ಟಂತೆ ಸಾಮಾನ್ಯ ಪ್ರಶ್ನೆಗಳು.

1. ಇಡೀ ಪಂಚಾಯಿತಿಗೆ ಸಂಬಂಧಪಟ್ಟಂತೆ ಒಂದು ಗ್ರಾಮಸಭೆಯಿರಬೇಕೇ? ಅಥವಾ ಅನುಕೂಲಕ್ಕೆ ತಕ್ಕಂತೆ ಚಿಕ್ಕ ಚಿಕ್ಕ ಹಲವು ಗ್ರಾಮಸಭೆಗಳು ಇರಬೇಕೇ ಎಂಬ ವಿಷಯವನ್ನು ಕುರಿತಂತೆ ಚರ್ಚೆ ನಡೆಯಿತು. ಕೆಲವೊಮ್ಮೆ ಒಂದು ಗ್ರಾಮಸಭೆಯ ವ್ಯಾಪ್ತಿಯೊಳಗೆ ಹಲವಾರು ಚಿಕ್ಕ ಚಿಕ್ಕ ಹಳ್ಳಿಗಳ ಗುಂಪೊಂದು ಸೇರಿಕೊಂಡಿರುತ್ತೆ. ಒಂದು ಹಳ್ಳಿಯ ಸದಸ್ಯರಿಗೆ ಸಭೆಯಲ್ಲಿ ಭಾಗವಹಿಸಲು ಮತ್ತೊಂದು ಹಳ್ಳಿಗೆ ಹೋಗಲು ತೊಂದರೆಯಾಗುತ್ತದೆ.

ಇ2. ಗ್ರಾಮಸಭೆಯು ನಡೆಸುವ ಸಭೆಗಳಲ್ಲಿ ಸದಸ್ಯರ ಹಾಜರಾತಿಗೆ ನಿರ್ದಿಷ್ಟ ಕೋರಂ ಇರಬೇಕೇ? ಎಂಬ ಅಂಶವನ್ನು ಕುರಿತಂತೆ ಚರ್ಚಿಸಲಾಯಿತು. ಸಮಾವೇಶದ ಪ್ರತಿನಿಧಿಗಳು ಮಹಿಳೆಯರಿಗೆ ಸಂಬಂಧಪಟ್ಟಂತೆ ನಿರ್ದಿಷ್ಟ ಕೋರಂ ಇರಲೇಬೇಕು. ಎಂಬ ಅಂಶವನ್ನು ಹೆಚ್ಚು ಒತ್ತಾಯಿಸಿದರು.

3. ಪಂಚಾಯಿತಿಯ ಮೂರು ಪದರಗಳಿಗೂ ನೇರ ಚುನಾವಣೆಯಿರಬೇಕೆ. ಬೇಡವೇ? ಎಂಬುದನ್ನು ಕುರಿತಂತೆ ಚರ್ಚೆ ನಡೆಯಿತು. ಬಹುಪಾಲು ಪ್ರತಿನಿಧಿಗಳು ಪಂಚಾಯಿತಿಗೆ ನೇರ ಚುನಾವಣೆಯಿರಬೇಕೆಂದು ಸೂಚಿಸಿದರು.

4. ಎಂ.ಎಲ್.ಎ. ಮತ್ತು ಎಂ.ಪಿ.ಗಳು ಗ್ರಾಮ ಪಂಚಾಯಿತಿಗಳಲ್ಲಿ ವಹಿಸಬಹುದಾದ ಪಾತ್ರವನ್ನು ಕುರಿತಂತೆ ಚರ್ಚೆ ನಡೆಯಿತು. ಕೆಲವು ಪ್ರತಿನಿಧಿಗಳು ಎಂ.ಎಲ್.ಎ/ಎಂ.ಪಿ.ಗಳು ಮತದಾನದ ಹಕ್ಕಿಲ್ಲದೆ ಪಂಚಾಯಿತಿ ಸಭೆಗಳಲ್ಲಿ ಭಾಗವಹಿಸಬಹುದು ಎಂದು ಅಭಿಪ್ರಾಯಪಟ್ಟರು. ಆದರೆ ಎಂ.ಎಲ್.ಎ/ಎಂ.ಪಿ.ಗಳು ಗ್ರಾಮಪಂಚಾಯಿತಿಯಂಥ ಬೇರಿನ ನೆಲೆಯ ಸಂಘಟನೆಗಳಲ್ಲಿ ಅನಗತ್ಯವಾದ ರಾಜಕೀಯವನ್ನು ತಂದು ಅದರ ಅಸ್ತಿತ್ವದ ಮೌಲಿಕತೆಯನ್ನೇ ಅಪಹಾಸ್ಯ ಮಾಡಬಹುದೆಂದು ಸಂಶಯಿಸಿದರು.

5. ಹಿಂದುಳಿದ ಜಾತಿಗಳಿಗೆ ಮೀಸಲಾತಿಯ ಅಗತ್ಯ ಕುರಿತಂತೆ ಚರ್ಚೆ ನಡೆಯಿತು. ಒರಿಸ್ಸಾದ ಪ್ರತಿನಿಧಿಗಳನ್ನು ಹೊರತುಪಡಿಸಿ ಉಳಿದೆಲ್ಲ ಪ್ರತಿನಿಧಿಗಳು ಈ ಮೀಸಲಾತಿಯನ್ನು ವಿರೋಧಿಸಿದರು.

**ಅಧಿಕಾರದ ಹಸ್ತಾಂತರ**

* ಸಂವಿಧಾನದ ತಿದ್ದುಪಡಿಯೊಳಗೆ ಅಧಿಕಾರದ ಹಸ್ತಾಂತರವನ್ನು ಅಳವಡಿಸಿಕೊಳ್ಳಬೇಕೇ ಎಂಬುದರ ಚರ್ಚೆ ನಡೆಯಿತು.

* 73ನೇ ಸಂವಿಧಾನದ ವಿಧಿಯ ತಿದ್ದುಪಡಿಯೊಳಗೇ ನ್ಯಾಯ ಪಂಚಾಯಿತಿನ್ನು ಅಳವಡಿಸಿಕೊಳ್ಳಬೇಕೆಂಬ ಎಂಬ ಚರ್ಚೆ.

* ಪಂಚಾಯತಿ ಚುನಾವಣೆಗೆ ಪ್ರತ್ಯೇಯಕ ಚುನಾವಣಾ ಆಯೋಗದ ನೇಮಕದ ಅಗತ್ಯ ಕುರಿತು ಚರ್ಚಿಸಲಾಯಿತು.

ಈ ಎಲ್ಲ ಚರ್ಚೆಗಳ ಹಿನ್ನೆಲೆಯಲ್ಲಿ ಬಹುಪಾಲು ಪ್ರತಿನಿಧಿಗಳು ಸಂವಿಧನದ 74ನೇ ವಿಧಿಯ ತಿದ್ದುಪಡಿಗೆ ಮತ್ತೊಂದು ತಿದ್ದುಪಡಿಯ ಅಗತ್ಯವಿಲ್ಲವೆಂದು ಅಭಿಪ್ರಾಯಪಟ್ಟರು. ಅದರ ಬದಲು ರಾಜ್ಯಸರ್ಕಾರಗಳಿಗೆ ಹೆಚ್ಚಿನ ಅಧಿಕಾರವನ್ನು ಕೊಟ್ಟು ರಾಜ್ಯಸರ್ಕಾರಗಳು ಗ್ರಾಮಪಂಚಾಯತಿಯ ರಚನೆ, ಅಧಿಕಾರ ಹಸ್ತಾಂತರ ಮುಂತಾದ ವಿಷಯಗಳಲ್ಲಿ ಅಗತ್ಯಕ್ಕೆ ತಕ್ಕಂತೆ ಬದಲಾವಣೆಗಳನ್ನು ಮಾಡಲು ಅನುವು ಮಾಡಿಕೊಕಬೇಕೆಂದು ಸಮಾವೇಶ ನಿರ್ಧರಿಸಿತು.

# ಪಂಚಾಯತ್ ಸಂಸ್ಥೆಗಳಲ್ಲಿ ಮಹಿಳೆಯರ ಸಂಖ್ಯೆ

## ಕರ್ನಾಟಕದ ಚಿತ್ರಣ :

**ಗ್ರಾಮ ಪಂಚಾಯತ್‌ಗಳು:**

**1993, ಡಿಸೆಂಬರ್ ಚುನಾವಣೆ ಆಧಿರತ**

| | |
|---|---|
| ಒಟ್ಟು ಗ್ರಾಮ ಪಂಚಾಯತ್‌ಗಳು | 5675 |
| ಒಟ್ಟು ಸದಸ್ಯರು | 80627 |
| (ಸರಾಸರಿ 400 ಜನರಿಗೆ ಓರ್ವ ಸದಸ್ಯ) | |
| ಒಟ್ಟು ಮಹಿಳಾ ಸದಸ್ಯರು | 35305-43.78% |
| ಪರಿಶಿಷ್ಟ ಜಾತಿ ಮಹಿಳೆಯರು | 7373 |
| ಪರಿಶಿಷ್ಟ ಪಂಗಡ ಮಹಿಳೆಯರು | 5933 |
| ಹಿಂದುಳಿದ ವರ್ಗದ ಮಹಿಳೆಯರು | 11325 |
| ಸಾಮಾನ್ಯ ವರ್ಗದ ಮಹಿಳೆಯರು | 11278 |

**ತಾಲ್ಲೂಕು ಪಂಚಾಯತ್‌ಗಳು:**

**1995, ಮಾರ್ಚ್4 ಚುನಾವಣೆ ಆಧಾರ**

| | |
|---|---|
| ಒಟ್ಟು ತಾಲ್ಲೂಕು ಪಂಚಾಯತ್‌ಗಳು | 175 |
| ಒಟ್ಟು ಸದಸ್ಯರು | 3340 |
| ಒಟ್ಟು ಮಹಿಳಾ ಸದಸ್ಯರು | 1343 - 40.20% |
| ಪರಿಶಿಷ್ಟ ಜಾತಿ ಮಹಿಳೆಯರು | 261 |
| ಪರಿಶಿಷ್ಟ ವರ್ಗದ ಮಹಿಳೆಯರು | 104 |
| ಹಿಂದುಳಿದ ವರ್ಗದ ಮಹಿಳೆಯರು | 441 |
| ಸಾಮಾನ್ಯ ವರ್ಗದ ಮಹಿಳೆಯರು | 478 |

**ಜಿಲ್ಲಾ ಪಂಚಾಯತ್‌ಗಳು:**

**1995, ಮಾರ್ಚ್ ಚುನಾವಣೆ ಆಧಾರಿತ**

| | |
|---|---|
| ಒಟ್ಟು ಜಿಲ್ಲಾ ಪಂಚಾಯತ್‌ಗಳು | 27 |
| ಒಟ್ಟು ಸದಸ್ಯರು | 919 |
| ಒಟ್ಟು ಮಹಿಳಾ ಸದಸ್ಯರು | 335-36.45% |
| ಪರಿಶಿಷ್ಟ ಜಾತಿ ಮಹಿಳೆಯರು | 63 |
| ಪರಿಶಿಷ್ಟ ವರ್ಗದ ಮಹಿಳೆಯರು | 22 |
| ಹಿಂದುಳಿದ ವರ್ಗದ ಮಹಿಳೆಯರು | 108 |
| ಸಾಮಾನ್ಯ ವರ್ಗದ ಮಹಿಳೆಯರು | 142 |

**ಮೂರು ಹಂತದ ಪಂಚಾಯತ್‌ಗಳಲ್ಲಿ ಒಟ್ಟು ಸದಸ್ಯರು - 84,886 ಒಟ್ಟು ಮಹಿಳಾ ಸದಸ್ಯರು - 36,983.**

### 1994-95ರಲ್ಲಿ ರಾಜಸ್ಥಾನದ ಪಂಚಾಯತ್ ಸಂಸ್ಥೆಗಳಿಗೆ ನಡೆದ ಚುನಾವಣೆಯಲ್ಲಿ ಆಯ್ಕೆಯಾದ ಮಹಿಳೆಯರ ಸಂಖ್ಯೆ

**ಗ್ರಾಮ ಪಂಚಾಯತ್‌ಗಳು:**

| | |
|---|---|
| ಒಟ್ಟು ಸದಸ್ಯರು | 1.12.897 |
| ಒಟ್ಟು ಮಹಿಳಾ ಸದಸ್ಯರು | 36.630 - 32.44% |
| ಸಾಮಾನ್ಯ ವರ್ಗದ ಮಹಿಳೆಯರು | 19.686 |
| ಪರಿಶಿಷ್ಟ ಜಾತಿಯ ಮಹಿಳೆಯರು | 6.515 |
| ಪರಿಶಿಷ್ಟ ವರ್ಗದ ಮಹಿಳೆಯರು | 5.697 |
| ಹಿಂದುಳಿದ ವರ್ಗದ ಮಹಿಳೆಯರು | 4.732 |

**ಪಂಚಾಯತ್ ಸಮಿತಿಗಳು:**

| | |
|---|---|
| ಒಟ್ಟು ಸದಸ್ಯರು | 5.494 |
| ಒಟ್ಟು ಮಹಿಳಾ ಸದಸ್ಯರು | 1.820-33.12% |
| ಸಾಮಾನ್ಯ ವರ್ಗದ ಮಹಿಳೆಯರು | 992 |
| ಪರಿಶಿಷ್ಟ ಜಾತಿಯ ಮಹಿಳೆಯರು | 328 |
| ಪರಿಶಿಷ್ಟ ವರ್ಗದ ಮಹಿಳೆಯರು | 280 |
| ಹಿಂದುಳಿದ ವರ್ಗದ ಮಹಿಳೆಯರು | 220 |

**ಜಿಲ್ಲಾ ಪಂಚಾಯತ್‌ಗಳು:**

| | |
|---|---|
| ಒಟ್ಟು ಸದಸ್ಯರು | 1028 |
| ಒಟ್ಟು ಮಹಿಳಾ ಸದಸ್ಯರು | 341 - 33.17% |
| ಸಾಮಾನ್ಯ ವರ್ಗದ ಮಹಿಳೆಯರು | 185 |
| ಪರಿಶಿಷ್ಟ ಜಾತಿಯ ಮಹಿಳೆಯರು | 61 |
| ಪರಿಶಿಷ್ಟ ವರ್ಗದ ಮಹಿಳೆಯರು | 53 |
| ಹಿಂದುಳಿದ ವರ್ಗದ ಮಹಿಳೆಯರು | 42 |

# ವಿಶ್ವಸಂಸ್ಥೆಯ ಮೆಟ್ಟಲೇರಿದ ಫಾತಿಮಾಬಿ

ಅಕ್ಟೋಬರ್ 16, 1998. ನ್ಯೂಯಾರ್ಕ್‌ನ ವಿಶ್ವಸಂಸ್ಥೆಯ ಕಟ್ಟಡಕ್ಕೆ ಓರ್ವ ವಿಶೇಷ ಅತಿಥಿಯ ಆಗಮನ. ವಿಶ್ವಸಂಸ್ಥೆಯ ಕಾರ್ಯದರ್ಶಿ ಕೋಫಿ ಅನ್ನಾನ್ ಅವರಿಂದ ಈ ವಿಶೇಷ ವ್ಯಕ್ತಿಗೆ ಜಾಗತಿಕ ಪ್ರಶಸ್ತಿ ಪ್ರದಾನ. ಜಗತ್ತಿನ ಮುಂಚೂಣಿ ಸಮೂಹ ಮಾಧ್ಯಮಗಳ ದೃಷ್ಟಿ ಈ ವ್ಯಕ್ತಿಯ ಮೇಲೇ.

ಇತ್ತ ಕಡೆ ಆಂಧ್ರ ಪ್ರದೇಶದ ಕರ್ನೂಲ್ ಜಿಲ್ಲೆಯ ಕುಲ್ವಾ ಗ್ರಾಮದಲ್ಲಿ ಅಂದು ಹಬ್ಬದ ವಾತಾವರಣ. ತಮ್ಮ ಊರಿನ ಹೆಣ್ಣುಮಗಳು ವಿಮಾನದಲ್ಲಿ ಹಾರಿಹೋಗಿ, ಬಹುದೊಡ್ಡ ಬಹುಮಾನ ತರುತ್ತಾಳೆ ಎಂಬ ಹೆಮ್ಮೆ. ಊರೆಲ್ಲಾ ಸಿಂಗಾರ. ಮನೆ, ಮನೆಯಲ್ಲೂ ಅದೇ ಮಾತು.

ಈ ಸಿರಿ ಸಂಭ್ರಮಕ್ಕೆ ಕಾರಣ ಫಾತಿಮಾ ಬಿ. ಮೂವತ್ತನಾಲ್ಕು ವರ್ಷದ ಫಾತಿಮಾ ಈಗ ಕುಲ್ವಾದ ಕಣ್ಮಣಿ. ವಿಶ್ವಸಂಸ್ಥೆಯ ಸಾಧಕರ ಪಟ್ಟಿಯಲ್ಲಿ ಹೆಸರು ಪಡೆದಾಕೆ. ವಿಶ್ವದ ಭೂಪಟದಲ್ಲಿ ಕುಲ್ವಾ ಗ್ರಾಮದ ಹೆಸರು ಎದ್ದುಕಾಣುವಂತೆ ಮಾಡಿದಾಕೆ.

ಮೂರು ವರ್ಷಗಳ ಕೆಳಗೆ ಕುಲ್ವಾ ಗ್ರಾಮ ಮತ್ತು ಫಾತಿಮಾ ಬಿ ಭಾರತದ ಸಾವಿರಾರು ಅನಾಮಧೇಯ ಹಳ್ಳಿಗಳಂತೆ, ಹೆಣ್ಣು ಮಕ್ಕಳಂತೆ ತಣ್ಣಗೆ ಇದ್ದವರು. ದೇಶದ ಎಲ್ಲೆಡೆಯಂತೆ ಅಲ್ಲೂ ಪಂಚಾಯತ್ ಚುನಾವಣೆ ನಡೆಯಿತು. ಮಹಿಳಾ ಮೀಸಲಾತಿ ಅನ್ವಯ ಫಾತಿಮಾ ಚುನಾಯಿತಳಾಗಿ ಬಂದಳು. ಅಷ್ಟೇ ಅಲ್ಲ ಆಕೆಗೆ ಸರಪಂಚಳ ಹುದ್ದೆಯೂ ಬಂದಿತು. ಮನೆಯವರೆಲ್ಲ ಮುಸಿ ಮುಸಿ ನಕ್ಕರು. ಊರವರು ಜೋರಾಗೇ ನಕ್ಕರು. ಹಿಗ್ಗಿದ್ದು ಮಾತ್ರ ಹಣ್ಣು ಮಾರಾಟದ ವೃತ್ತಿ ಮಾಡುವ ಫಾತಿಮಾಬಿಯ ಗಂಡ. "ನೀನು ಗೆದ್ದಿದ್ದು ಸರಿ. ಆದರೆ ಬುರ್ಖಾ ತೆಗೆದು ಗಂಡಸರಂತೆ ಎಲ್ಲ ಕಡೆ ಓಡಾಡಿದರೆ ಅಲ್ಲಾಹ್‌ಗೆ ಅವಮಾನ ಆಗುತ್ತೆ. ನೀನು ಸುಮ್ಮಿದ್ದು ಬಿಡು. ನಿನ್ನ ಕೆಲಸ ನಾನು ನೋಡಿಕೊಳ್ತೀನಿ" ಎಂದ. ಮನೆ-ಗಂಡ-ಮಕ್ಕಳು-ಹಿರಿಯರು-ಧರ್ಮ ಇದಿಷ್ಟು ಬಿಟ್ಟರೆ ಬೇರೇನೂ ಗೊತ್ತಿರದಿದ್ದ ಫಾತಿಮಾ ತನ್ನ ಕೆಲಸ ಸುಲಭವಾಯ್ತೆಂದು ಭಾವಿಸಿದಳು. ಗಂಡ ತರುತ್ತಿದ್ದ ಕಾಗದ ಪತ್ರಕ್ಕೆಲ್ಲ ಕಣ್ಣುಮುಚ್ಚಿ ಹೆಬ್ಬೆಟ್ಟು ಒತ್ತುತ್ತಿದ್ದಳು.

ಒಂದು ವರ್ಷ ಹಳ್ಳಿಯಲ್ಲಿ ಫಾತಿಮಾಳ ಹೆಸರು - ಆಡಳಿತ ಮಾತ್ರ ಸೈಯದ್ ಮೊಹಿಯುದೀನ್ ಭಾಷಾದು. ಈಕೆಗೆ ಮತ ನೀಡಿದ್ದ ಹೆಣ್ಣು ಮಕ್ಕಳು ರೋಸಿ ಹೋದರು. ಫಾತಿಮಾ ಮನೆಯಿಂದ ಹೊರಬಂದರೆ ಸಾಕು ನಾವು ನಿನಗೆ ಮತ ಹಾಕಿದ್ದು ಇದಕ್ಕೇನಾ ಎಂದು ಮೂದಲಿಸತೊಡಗಿದರು.

ಆಗ ಕಣ್ತೆರೆದ ಫಾತಿಮಾಗೆ ನಿಜ ಸ್ಥಿತಿಯ ಅರಿವಾಯಿತು. ಈ ಒಂದು ವರ್ಷದಲ್ಲಿ ತನ್ನ ಹೆಸರಿನ ಆಡಳಿತದಲ್ಲಿ ಕುಲ್ವಾ ಹಿಂದೆ ಎಲ್ಲಿತ್ತೋ ಅಲ್ಲೇ ಇತ್ತು. ಕಿತ್ತು ತಿನ್ನುವ ಬಡತನ, ಅನಕ್ಷರತೆ, ಕೆರೆಯಿದ್ದೂ ನೀರಿಲ್ಲದಂತಹ ಸ್ಥಿತಿ 'ಕುಲ್ವಾ'ವನ್ನು ಕುರೂಪಗೊಳಿಸಿತ್ತು. ಎಚ್ಚತ್ತ ಫಾತಿಮಾ ಮನೆಯಿಂದ ಹೊರಬಂದಳು. ಬಡತನದ ಮೂಲಕ್ಕೆ ಶಸ್ತ್ರಕ್ರಿಯೆ ಮಾಡದೆ ನನ್ನ ಊರು ಸುಧಾರಿಸುವುದಿಲ್ಲ ಎಂದು ಅರಿತಳು. ಆಕೆಯ ಈ ಎಚ್ಚರಕ್ಕೆ ಬೆಂಬಲವಾಗಿ ನಿಂತಿದ್ದು 'ಪೊಡ್ಡು' ಎಂಬ ವೈ. ಶಂಕರಮ್ಮ ಅವರ ಮಹಿಳಾ ಸಂಘಟನೆ. ಫಾತಿಮಾರ ಮೊದಲ ಯೋಜನೆ ಕೃಷಿ ಕಾರ್ಮಿಕರಿಗಾಗಿ ರೂಪಿಸಿದ 'ಪೊಡುಪು ಲಕ್ಷ್ಮಿ' ಎಂಬ ಉಳಿತಾಯ ಯೋಜನೆ. ಸುಮಾರು 260 ಸದಸ್ಯರಿಂದ ಒಂದೇ ವರ್ಷದಲ್ಲಿ 2 ಲಕ್ಷ ರೂಪಾಯಿ ಉಳಿತಾಯ. ವಿಶ್ವಸಂಸ್ಥೆಯ ಅಭಿವೃದ್ಧಿ ಯೋಜನೆಯ ಅಧಿಕಾರಿಗಳನ್ನು ಆಕರ್ಷಿಸಿದ ಈ ಸಾಧನೆ ಅದಕ್ಕೆ ತಕ್ಕಂತೆ ಸಹಾಯಧನ ನೀಡಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳುವಂತೆ ಪ್ರೇರೇಪಿಸಿತು.

ಹೀಗೆ ಆರಂಭವಾದವು ಸಾಧನೆಗಳ ಸರಮಾಲೆ. ಬಡತನ ನಿವಾರಣೆಯ ದಿಕ್ಕಿನಲ್ಲಿ ಒಂದೊಂದೇ ಹೆಜ್ಜೆ. ಕೃಷಿ ಕಾರ್ಮಿಕ ಹೆಣ್ಣುಮಕ್ಕಳಿಗಾಗಿ ಹಳ್ಳಿಯಲ್ಲೊಂದು 'ಅಮ್ಮವಾಡಿ' - ತಾಯಿಯ ಮಡಿಲು (ಅಂಗನವಾಡಿ) ಆರಂಭವಾಯಿತು. ಶಾಲೆ ಕಲಿಯದಿದ್ದ ಯುವತಿಯರಿಗೆ ರಾತ್ರಿ ಶಾಲೆ; ಸೈಕ್ಲಿಂಗ್ ತರಬೇತಿ, ಹೊಲಿಗೆ ಮತ್ತು ಕಸೂತಿ ತರಬೇತಿಗಳು; ಊರಿನ ಹೆಣ್ಣು ಮಕ್ಕಳಿಗೆ ಗ್ರಾಮದ - ಕುಟುಂಬದ ಹಾಗೂ ವೈಯಕ್ತಿಕ ಸ್ವಚ್ಛತೆಯ ಪಾಠ; ಸ್ವಯಂ ಉದ್ಯೋಗ ಕೈಗೊಳ್ಳಲು ಪ್ರೋತ್ಸಾಹ ಹಾಗೂ ನೆರವು....

ಇದೆಲ್ಲಕ್ಕೂ ಕಿರೀಟವಿಟ್ಟಂತೆ ನಡೆದಿದ್ದು ಫಾತಿಮಾಬಿ ನೇತೃತ್ವದಲ್ಲಿ ಊರಿನ ಹೆಣ್ಣುಮಕ್ಕಳೆಲ್ಲ ನಡೆಸಿದ ಕೆರೆಯ ಹೂಳು ತೆಗೆದು ನೀರು ಸಂಗ್ರಹಿಸುವ ಬೃಹತ್ ಕಾರ್ಯ. ಊರಿನ ಗಂಡಸರೆಲ್ಲ ಇವರನ್ನು ನೋಡಿ ನಕ್ಕರು. ಆರಂಭ ಶೂರತ್ವ ಎಂದು ಹಂಗಿಸಿದರು. ಒಂದೆರಡು ದಿನವಾದ ಮೇಲೆ ನಮಗೇ ಬುಲಾವ್ ಬರುತ್ತೆ ಎಂದು ಕಾದರು. ಆದರೆ ಕುಲ್ವಾದ ಹೆಣ್ಣುಮಕ್ಕಳು ಕೇವಲ ಆರು ದಿನಗಳಲ್ಲಿ ಊರಿನ ಕೆರೆಯನ್ನು ಶುದ್ಧಗೊಳಿಸಿದರು. ಹೊಸ ದಾಖಲೆಯನ್ನು ಸೃಷ್ಟಿಸಿದರು. ಊರಿನ ಸಾವಿರಾರು ಎಕರೆ ಭೂಮಿಗೆ ನೀರುಣಿಸಿ ಹಸಿರು ಚಿಮ್ಮಿಸಿದರು.

ಇಂತಹುದೇ ಒಗ್ಗಟ್ಟು ಹಾಗೂ ಶ್ರಮದಿಂದ ಕುಲ್ವಾಗೆ ಡಾಂಬರು ರಸ್ತೆಯೂ ಬಂದಿದೆ. ಫಾತಿಮಾಬಿ ಹಾಗೂ ಆಕೆಯ ಊರಿನ ಮಹಿಳೆಯರು ಆಂಧ್ರದ ಮನೆಮಾತಾದರು.

ಫಾತಿಮಾ ಇನ್ನೂ ಅದೇ ಜೋಪಡಿಯಲ್ಲಿದ್ದಾಳೆ. ಅಧಿಕಾರ ಹಾಗೂ ಸಾಧನೆಗಳಿಂದಾಗಿ ಪ್ರಶಂಸೆಯು ಮಹಾಪೂರವೇ ಹರಿದುಬಂದಿದ್ದರೂ ಈಕೆ 'ರಾಜಕಾರಣಿ'ಯಾಗಿಲ್ಲ. ತನಗೆ ದೊರೆತ ಪ್ರಶಸ್ತಿಗೆ ಎಲ್ಲರೂ ಸಹಭಾಗಿಗಳು ಎನ್ನುವ ವಿನಯವಂತಿಕೆ ಇದೆ.

ಇಂದು ಈ ಹಂತದಲ್ಲಿ ಫಾತಿಮಾಬಿಯ ಸಾಧನೆ ಪಂಚಾಯತ್ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಮೀಸಲಾತಿ ನೀಡಿದ್ದರಿಂದ ಆಗಿರುವ ಪ್ರಗತಿಗೆ ಸಮರ್ಥನೆಯಂತಿದೆ. ಶಾಸಕಾಂಗ ಹಾಗೂ ಸಂಸತ್ತುಗಳಲ್ಲೂ ಮಹಿಳೆಯರಿಗೆ ಮೀಸಲಾತಿ ನೀಡಬೇಕು ಎಂಬ ಬೇಡಿಕೆಗೆ ಪುಷ್ಟಿ ನೀಡುತ್ತದೆ.

ಅಷ್ಟೇ ಅಲ್ಲ, ಪ್ರಮೀಳಾ ದಂಡವತೆ ಅವರು ಹೇಳಿದಂತೆ 'ಚುನಾಯಿತ ಮಹಿಳೆಯರು, ಮಹಿಳಾ ಚಳವಳಿಗಳೊಂದಿಗೆ ನಿಕಟವಾದ ಸಂಪರ್ಕ ಹೊಂದಿದ್ದರೆ ಹೆಚ್ಚು ಯಶಸ್ವಿಯಾಗಬಲ್ಲರು' ಎಂಬ ಮಾತಿಗೆ ತಕ್ಕ ಉದಾಹರಣೆಯೂ ಆಗಿದೆ.

- *ಎಸ್. ಸತ್ಯಾ*

# ಮಹಿಳೆಯರಿಗೆ ಮೀಸಲಾತಿ-ರಾಜಕೀಯ ಸಮಾನತೆ

- ಹೇಮಲತಾ ಮಹಿಷಿ

ಮಹಿಳೆಯರ ಸಮಾನತೆಗಾಗಿಯ ಹೋರಾಟ ಈಗ ಒಂದು ಮುಖ್ಯ ಹಂತವನ್ನು ತಲುಪಿದೆ. ದೇಶದ ರಾಜಕೀಯ ಆಗು-ಹೋಗುಗಳಲ್ಲಿ ನೇರವಾಗಿ. ಪರಿಣಾಮಕಾರಿಯಾಗಿ ಭಾಗವಹಿಸಲು ಮಹಿಳೆಯರಿಗೂ ಹೆಚ್ಚಿನ ಅವಕಾಶವಿರಬೇಕು ಎಂಬುದು ಈಗ ವಿಶ್ವದ ಎಲ್ಲೆಡೆ ಮಹಿಳೆಯರ ಹಕ್ಕೊತ್ತಾಯವಾಗಿದೆ.

ಇತ್ತೀಚಿನ ಲೋಕಸಭೆ ಚುನಾವಣೆಗೆ ಮೊದಲು ಮಹಿಳೆಯರ ಬೆಂಬಲವನ್ನು ಗಳಿಸಲು ಎಲ್ಲ ರಾಜಕೀಯ ಪಕ್ಷಗಳು ಪೈಪೋಟಿ ನಡೆಸಿದವು. ಶಾಸನ ಸಭೆಗಳಲ್ಲಿ. ಪಾರ್ಲಿಮೆಂಟಿನಲ್ಲಿ ಮಹಿಳೆಯರಿಗೆ ಮೀಸಲಾತಿ ಕಲ್ಪಿಸುವುದಾಗಿ ಸಭೆಗಳಲ್ಲಿ ವಾಗ್ದಾನ ನೀಡಿದವು. ಕೇವಲ 33% ಮಾತ್ರವೇಕೆ. 50% ಕೇಳಿ ಎಂದು ಹೇಳಿದವು ಕೆಲವು. ಅಧಿಕಾರಕ್ಕೆ ಬಂದ ಕೂಡಲೇ ಮಾಡುವ ಮೊದಲ ಕೆಲಸ ಅದು ಎಂದು ಜನತಾದಳ ತಿಳಿಸಿತು. ಇತ್ತೀಚಿನ ರಾಜಕೀಯ ಬೆಳವಣಿಗೆಯನ್ನು ನೋಡಿದಾಗ ಉಳಿದ ಆಶ್ವಾಸನೆಗಳಂತೆ ಈ ವಿಷಯನ್ನೂ ರಾಜಕೀಯ ಪಕ್ಷಗಳು ಹಗುರವಾಗಿ ತೆಗೆದುಕೊಂಡಿರುವಂತೆ ಕಂಡುಬರುತ್ತದೆ. ಚುನಾವಣೆ ಮುಗಿದ ಕೂಡಲೇ ಮರೆಯಾಗ ಬೇಕಾದ ವಿಚಾರ ಇದು ಎಂದು ಭಾವಿಸಲಾಗಿತ್ತು. ಆದರೆ. ಮಹಿಳೆಯರು ಈ ವಿಷಯವನ್ನು ಮರೆಯಲಿಲ್ಲ. ಈ ರೀತಿ ಭಾವಿಸಲೂ ಇಲ್ಲ. ಬಿಜೆಪಿ-ಮಿತ್ರಪಕ್ಷಗಳು ಮಹಿಳೆಯರ ಮತಗಳನ್ನು ಮತ್ತಷ್ಟು ಭದ್ರಪಡಿಸಿಕೊಳ್ಳಲು ಈ ಬಗ್ಗೆ ಸಂವಿಧಾನ ತಿದ್ದುಪಡಿಯ ಒಂದು ಮಸೂದೆಯನ್ನು ನಾಲ್ಕನೆಯ ಪ್ರಯತ್ನವಾಗಿ ಪಾರ್ಲಿಮೆಂಟಿನಲ್ಲಿ ಮಂಡಿಸಿಯೇ ಬಿಟ್ಟವು. ಆದರೆ. ಸುಸೂತ್ರವಾಗಿ. ವಿರೋಧವಿಲ್ಲದಂತೆ ಅದು ಕಾನೂನಾಗಲು ಬೇಕಾದ ಪೂರ್ವಭಾವಿ ಸಿದ್ಧತೆಗಳೇನನ್ನೂ ಮಾಡಿಕೊಳ್ಳದೇ ಸಭೆಯ ಮುಂದೆ ಅಧಿವೇಶನದ ಕೊನೆಯ ದಿನ ಮಂಡಿಸಿದ್ದು ಈ ವಿಷಯದಲ್ಲಿ ರಾಜಕೀಯ ಪಕ್ಷಗಳಿಗೆ. ಅಧಿಕಾರದಲ್ಲಿರುವ ಪಕ್ಷಗಳನ್ನು ಒಳಗೊಂಡು. ಆಸಕ್ತಿ ಇಲ್ಲದಿರುವುದನ್ನು ತೋರಿಸುತ್ತದೆ. ಈ ವಿಷಯವು ರಾಜಕೀಯ ಆಟದಲ್ಲಿ ಒಂದು ನಡೆಯಾಗಿರುವಂತೆ ಭಾಸವಾಗುತ್ತದೆ.

ಮಹಿಳೆಯರಿಗೆ ಶಾಸನ ಸಭೆಗಳಲ್ಲಿ ಮೀಸಲಾತಿ ಅವಶ್ಯವಿದೆಯೆ? ಮೀಸಲಾತಿಯ ವಿಷಯ ಮೊದಲಿನಿಂದಲೂ ಮಹಿಳೆಯರ ಮನಸ್ಸನ್ನು ಕಾಡುತ್ತಿದೆ. ಈವರೆಗಿನ ಮೀಸಲಾತಿಯ ಪರಿಣಾಮಗಳನ್ನು ಕಂಡು. ಮುಂದೆ ಬರಬೇಕು. ಬರಲು ಅವರಿಗೆ ಅರ್ಹತೆ ಇದೆ ಎಂದು ಮಹಿಳೆಯರು ಈವರೆಗೆ ನಂಬಿದ್ದರು. ಆರಂಭದಲ್ಲಿ ನಾನೂ ಅದರಲ್ಲಿ ನಂಬಿಕೆ ಇಟ್ಟಿದ್ದೆ. ಆದರೆ. ಎಲ್ಲ ಕ್ಷೇತ್ರಗಳಲ್ಲಿ ಅನರ್ಹ ಪುರುಷರಿಗೆ ಸ್ಥಾನಗಳನ್ನು ಕೊಟ್ಟರೂ. ಅವರಿಂದ ಯಾವುದೇ ಸಾಧನೆಗಳನ್ನು ನಿರೀಕ್ಷಿಸದಿದ್ದರೂ ಅರ್ಹಮಹಿಳೆಯರನ್ನು ಬೇಕೆಂದೇ ಕಡೆಗಣಿಸುತ್ತಿರುವುದು. ಅವರು ತಮ್ಮ ನಿರೀಕ್ಷೆಯ ಅರ್ಹತೆಯ ಮಟ್ಟಕ್ಕೆ ಇನ್ನೂ ಬಂದಿಲ್ಲವೆಂದು ಹೇಳುತ್ತಿರುವುದು ಮಹಿಳೆಯರ ಭ್ರಮೆಯ ನಿರಸನಕ್ಕೆ ಕಾರಣವಾಗಿದೆ. ಮೀಸಲಾತಿಯ ಕಡ್ಡಾಯವಿಲ್ಲದಿದ್ದಲ್ಲಿ ಮಹಿಳೆಯರಿಗೆ ರಾಜಕೀಯ ಶಕ್ತಿ ಖಂಡಿತಾ ದೊರಕುವುದಿಲ್ಲ ಎಂಬುದು ಸೂರ್ಯ ಪ್ರಕಾಶದಷ್ಟು ನಿಚ್ಚಳವಾಗಿದೆ. ವೇದಿಕೆಯ ಮೇಲೆ ದೊಡ್ಡ ದೊಡ್ಡ ಮಾತುಗಳನ್ನು ಆಡಿದ ಪುರುಷ ರಾಜಕಾರಣಿಗಳು. ಪಕ್ಷಗಳು ಈಗ ಮಸೂದೆ ಕಾನೂನಾಗದಂತೆ ಅಡ್ಡಗಾಲು ಹಾಕುತ್ತಿರುವುದರ ಕಾರಣವೇನು ಎಂದು ಯೋಚಿಸಿದಾಗ ತಕ್ಷಣ ಹೊಳೆಯುವುದು ಸ್ವಹಿತರಕ್ಷಣೆ. ಸುಮಾರು 181 ಮಹಿಳೆಯರು ಪಾರ್ಲಿಮೆಂಟಿಗೆ ಪ್ರವೇಶ ಪಡೆದರೆ ಅಷ್ಟು ಪುರುಷರು ತಮ್ಮ ಸ್ಥಾನ ಕಳೆದುಕೊಳ್ಳುತ್ತಾರೆ. ಯಾವ ಯಾವ ದೊಡ್ಡ ತಲೆಗಳು ಉರುಳುತ್ತವೆಯೋ ತಿಳಿಯದು. ಅಲ್ಲದೇ. ರಾಜಕೀಯ ಗಂಡಸರ ವಿಷಯ. ಹೆಂಗಸರಿಗೇನು ಕೆಲಸ ಅದರಲ್ಲಿ. ಅವರ ಜಾಗ ಮನೆಯಲ್ಲಿ ಎಂದು ಭದ್ರವಾಗಿ ನಂಬಿರುವ ಹಲವಾರು ಸಂಸತ್ ಸದಸ್ಯರು. ರಾಜಕೀಯ ನಾಯಕರು ಇನ್ನೂ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಆದರೆ. ಅದನ್ನು ಬಹಿರಂಗವಾಗಿ ಹೇಳಲು ಧೈರ್ಯವಾಗದೆ ತಾಂತ್ರಿಕತೆಯ ಮೊರೆ ಹೋಗುತ್ತಿದ್ದಾರೆ. ಹಿಂದುಳಿದ ವರ್ಗದವರ ಹಿತರಕ್ಷಕರು ತಾವೆಂದು ಕಾಣಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ.

ಮಹಿಳಾ ಓಟ್‌ಬ್ಯಾಂಕನ್ನು ಒಡೆಯುವ ಪ್ರಯತ್ನ ನಡೆಸಿದ್ದಾರೆ. ಮಹಿಳಾ ಓಟ್‌ಬ್ಯಾಂಕ್ ಎನ್ನುವುದು ಇದೆ ಎಂದು ನಾವು ಮಹಿಳೆಯರು ಭಾವಿಸಿಲ್ಲ. ಆದರೆ ರಾಜಕಾರಣಿಗಳು ರಾಜಕೀಯ ಪಕ್ಷಗಳು ಎಲ್ಲ ವಿಷಯಗಳನ್ನು ಆ ಚೌಕಟ್ಟಿನಲ್ಲಿಯೇ ನೋಡುವ ದೃಷ್ಟಿ ಭ್ರಮೆ ಬೆಳೆಸಿಕೊಂಡಿವೆ.

ಈಗ ಲೋಕಸಭೆಯಲ್ಲಿ ಮಂಡಿಸಿರುವ ಮಸೂದೆಯಂತೆ ಲೋಕಸಭೆ ಹಾಗೂ ರಾಜ್ಯದ ವಿಧಾನಸಭೆಗಳ ಒಟ್ಟು ಚುನಾಯಿತ ಸ್ಥಾನಗಳಲ್ಲಿ 33% ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಿಡಬೇಕು. ಇದರಲ್ಲಿ ಸಂವಿಧಾನದತ್ತವಾದ ಪರಿಶಿಷ್ಟಜಾತಿ-ಪಂಗಡಗಳ ಮೀಸಲಾತಿ ಸ್ಥಾನಗಳಲ್ಲಿ ಮಹಿಳೆಯರಿಗೆ ಕೊಡಬೇಕಾದ 33% ಸ್ಥಾನಗಳೂ ಒಳಗೊಳ್ಳುತ್ತವೆ. ಈ 33% ಸ್ಥಾನಗಳಲ್ಲಿ (ಪರಿಶಿಷ್ಠ ಜಾತಿ-ಪಂಗಡ ಸ್ಥಾನಗಳನ್ನು ಬಿಟ್ಟು) ಹಿಂದುಳಿದ ವರ್ಗದವರಿಗೆ ಪುನಃ ಮೀಸಲಾತಿ ಕಲ್ಪಿಸಬೇಕೆ ಎನ್ನುವುದು ಈಗಿನ ಪ್ರಶ್ನೆಯಾಗಿದೆ. ಈ ಪ್ರಶ್ನೆಯನ್ನು ಎತ್ತಿ ಈ ಮಸೂದೆಯ ವಿರೋಧಿಗಳು ಯಶಸ್ವಿಯಾಗಿ ಗೊಂದಲವನ್ನು ಸೃಷ್ಟಿಸಿದ್ದಾರೆ. ಮಸೂದೆ ಕಾನೂನಾಗದಂತೆ ತಡೆಯನ್ನು ಒಡ್ಡಿದ್ದಾರೆ. ಸ್ವಾತಂತ್ರ್ಯ ಬಂದಾಗಿನಿಂದ ಎತ್ತಿರದ ಈ ಪ್ರಶ್ನೆಯನ್ನು ಮಹಿಳಾ ಮೀಸಲಾತಿಯ ಸಂದರ್ಭದಲ್ಲಿ ಮಾತ್ರ ಏಕೆ ಎತ್ತಲಾಗುತ್ತಿದೆ? ಮಹಿಳಾ ಮೀಸಲಾತಿ ಸ್ಥಾನಗಳಲ್ಲಿ ಹಿಂದುಳಿದ ವರ್ಗದವರಿಗೆ ಸ್ಥಾನ ಕಲ್ಪಿಸಬೇಕೆನ್ನುವವರು ಉಳಿದ 67% ಸ್ಥಾನಗಳಲ್ಲಿ ಹಿಂದುಳಿದ ವರ್ಗದವರಿಗೆ ಅದೇ ರೀತಿಯ ಮೀಸಲು ಸ್ಥಾನ ಕಲ್ಪಿಸಲು ಸಿದ್ಧರಿದ್ದಾರೆಯೆ? ಮಹಿಳೆಯರಿಗೆ ಅದು ಅನ್ವಯಿಸಿದರೆ ಉಳಿದ ಸ್ಥಾನಗಳಿಗೂ ಅದು ಅನ್ವಯಿಸಬೇಕು. ಈವರೆಗೆ ಹಿಂದುಳಿದ ಜಾತಿ-ಪಂಗಡಗಳಿಗೆ ಮೀಸಲಾತಿ ಇಲ್ಲದಿದ್ದರೂ ಅವರಿಗೇ ಹೆಚ್ಚಿನ ಸ್ಥಾನ ಸಿಕ್ಕಿಲ್ಲವೇ? ಅದೇ ರೀತಿ, ಮಹಿಳಾ ಮೀಸಲುಸ್ಥಾನಕ್ಕೆ ಅಭ್ಯರ್ಥಿಗಳನ್ನು ಆರಿಸುವಾಗ ಎಲ್ಲ ವರ್ಗದವರಿಗೆ ಸೂಕ್ತ ಪ್ರಾತಿನಿಧ್ಯತೆ ದೊರಕುವಂತೆ ನೋಡಿಕೊಳ್ಳಲು ಸಾಧ್ಯವಿಲ್ಲವೆ? ಅದು ಪ್ರತಿಯೊಂದು ಪಕ್ಷಗಳ ಕೈಯಲ್ಲಿಯೇ ಇಲ್ಲವೆ? ಅದಕ್ಕಾಗಿ ಮಸೂದೆಯನ್ನು ತಡೆಹಿಡಿಯುವ ಅಗತ್ಯವಿದೆಯೇ? ಮಹಿಳಾ ಮೀಸಲಾತಿಯಲ್ಲಿ ಪುನಃ ಬೇರೆ ಜಾತಿ. ಪಂಗಡಗಳ ಆಧಾರದ ಮೇಲೆ ಮೀಸಲಾತಿ ಕಲ್ಪಿಸುವುದನ್ನು ನಾನು ವಿರೋಧಿಸುತ್ತೇನೆ. ಆದರೆ, ಈ ವಿರೋಧ ಹಿಂದುಳಿದ ವರ್ಗ-ಪಂಗಡಗಳ ಮಹಿಳೆಯರು ರಾಜಕೀಯ ಪ್ರವೇಶ ಮಾಡುವುದರ ವಿರುದ್ಧ ಅಲ್ಲ. ಈಗ ಅಭ್ಯರ್ಥಿಗಳನ್ನು ಆರಿಸುವಾಗ ಹಿಂದುಳಿದ ಜಾತಿ-ಪಂಗಡಗಳಿಗೆ ಕೊಡುತ್ತಿರುವ ಗಮನವನ್ನೇ ಮಹಿಳಾ ಅಭ್ಯರ್ಥಿಗಳನ್ನು ಆರಿಸುವಾಗಲೂ ಕೊಡಬೇಕು ಎಂಬುದು ನನ್ನ ಅಭಿಪ್ರಾಯ. ಆಗಲೇ ಸಮರ್ಥ ಮಹಿಳೆಯರು ಎಲ್ಲ ಜಾತಿ-ಪಂಗಡಗಳಿಂದ ಮುಂದೆ ಬರಲು ಸಾಧ್ಯ. ಇಲ್ಲವಾದರೆ, ಒಂದು ಚುನಾವಣಾ ಕ್ಷೇತ್ರದಲ್ಲಿ ಅರ್ಹಮಹಿಳೆ ಇಲ್ಲದಿದ್ದಾಗಲೂ ಬಲವಂತವಾಗಿ ಒಂದು ಜಾತಿ-ಪಂಗಡದ ಮಹಿಳೆಯನ್ನೇ ನಿಲ್ಲಿಸಬೇಕಾದ ಅನಿವಾರ್ಯತೆ ಉಂಟಾಗುತ್ತದೆ.

ಮಹಿಳೆಯರು ರಾಜಕೀಯ ಕ್ಷೇತ್ರವನ್ನು ಹೆಚ್ಚಿನ ಸಂಖ್ಯೆಯಲ್ಲಿ ಪ್ರವೇಶಿಸುವುದರಿಂದ ಅವರಿಗೆ ನ್ಯಾಯ ಸಲ್ಲುವುದು ಮಾತ್ರವಲ್ಲ, ರಾಜಕೀಯ ಕ್ಷೇತ್ರದ ಬಣ್ಣವೂ ಬದಲಾಗುತ್ತದೆ. ರಾಜಕಾರಣದ ಈಗಿನ ಕೆಟ್ಟ ವ್ಯಾಖ್ಯಾನವೂ ಬದಲಾಗುತ್ತದೆ. ಹಾಗೂ ಇತ್ತೀಚಿನ ದಿನಗಳಲ್ಲಿ ಹೆಚ್ಚುತ್ತಿರುವ ರಾಜಕೀಯ ಅಪರಾಧಿಕರಣದ ಪ್ರಮಾಣವೂ ಕಡಿಮೆಯಾಗುತ್ತದೆ.

ರಾಜ್ಯ ಶಾಸನಸಭೆ ಹಾಗೂ ಲೋಕಸಭೆಯಲ್ಲದೇ ರಾಜ್ಯಸಭೆ ಹಾಗೂ ವಿಧಾನ ಪರಿಷತ್ತುಗಳಲ್ಲೂ ಮಹಿಳೆಯರಿಗೆ ಕನಿಷ್ಠ 33% ಮೀಸಲಾತಿ ಕೊಡುವುದರ ಅವಶ್ಯಕತೆ ಇದೆ.

ಶಾಸನ ಸಭೆ ಹಾಗೂ ಲೋಕಸಭೆ ಶಾಸನ ರಚಿಸುವ ಸದನಗಳಾದ್ದರಿಂದ ಹಾಗೂ ಇಡೀ ದೇಶಕ್ಕೆ ಕಾರ್ಯನೀತಿ ರೂಪಿಸುವ ಸದನಗಳಾದ್ದರಿಂದ ಸಮರ್ಥ ಮಹಿಳೆಯರು ಈ ಸ್ಥಾನಗಳನ್ನು ತುಂಬುವ ಅವಶ್ಯಕತೆ ಇದೆ. ಮೀಸಲಾತಿ ಮಹಿಳೆಯರಿಗೆ ಕೊಡುವ ಅವಕಾಶ ಮಾತ್ರವಾಗದೇ ಮಹಿಳಾ ನಾಯಕತ್ವ ರೂಪಿಸುವ ಜಾಗಗಳೂ ಆಗಬೇಕು. ಅದಕ್ಕಾಗಿ ವಿದ್ಯಾವಂತ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ರಾಜಕೀಯ ಕ್ಷೇತ್ರವನ್ನು ಪ್ರವೇಶಿಸಬೇಕು. ರಾಜ್ಯ-ದೇಶದ ಆಗುಹೋಗುಗಳಲ್ಲಿ ಹೆಚ್ಚಿನ ಆಸಕ್ತಿವಹಿಸಬೇಕು.

## ದುರ್ಬಲ ವರ್ಗದವರಿಗೆ ವಸತಿ

ದುರ್ಬಲ ವರ್ಗದವರಿಗೆ ವಿವಿಧ ಯೋಜನೆಗಳನ್ವಯ ಒಂದು ಲಕ್ಷ ಮನೆಗಳ ನಿರ್ಮಾಣ ಫಲಾನುಭವಿಗಳ ಆಯ್ಕೆಗೆ ವಿಶೇಷ ಸಮಿಕ್ಷೆ.

ಬಡವರಿಗೆ ಮನೆ ಒದಗಿಸುದು ರಾಜ್ಯ ಸರ್ಕಾರದ ಒಂದು ಪ್ರಮುಖ ಜವಾಬ್ದಾರಿ. ಆದರೆ ಕಳೆದೆರಡು ವರ್ಷಗಳಲ್ಲಿ ಕಾರ್ಯರೂಪಕ್ಕೆ ತರಲು ಸಾಧ್ಯವಾಗದಂತಹ ಗುರಿಗಳನ್ನು ನಿಗಧಿಪಡಿಸಲಾಗಿತ್ತು. ಕಳೆದ 3 ವರ್ಷಗಳಲ್ಲಿ ಆಶ್ರಯ ಯೋಜನೆಯ ಅಡಿಯಲ್ಲಿ 77,856 ಮನೆಗಳನ್ನೂ ಡಾ. ಅಂಬೇಡ್ಕರ್ ಗೃಹ ನಿರ್ಮಾಣ ಯೋಜನೆಯ ಅಡಿಯಲ್ಲಿ 22,402 ಮನೆಗಳನ್ನೂ ಮತ್ತು ಇಂದಿರಾ ಅವಾಸ್ ಯೋಜನೆಯ ಅಡಿಯಲ್ಲಿ 23,148 ಮನೆಗಳನ್ನು ಕಟ್ಟಲಾಗಿದೆ. ವಾಸ್ತವಿಕವಾಗಿ ಕಾರ್ಯರೂಪಕ್ಕೆ ತರಬಹುದಾದಂತಹ ಗುರಿಯನ್ನು ಸರ್ಕಾರ ಹಾಕಿಕೊಳ್ಳುತ್ತದೆ. ಮುಂಬರುವ ವರ್ಷದಲ್ಲಿ ಆಶ್ರಯ (60,000), ಅಂಬೇಡ್ಕರ್ ಗೃಹ ನಿರ್ಮಾಣ ಯೋಜನೆ (25,000) ಮತ್ತು ಇಂದಿರಾ ಅವಾಸ (15,000) ಯೋಜನೆಗಳ ಅಡಿಯಲ್ಲಿ ಒಟ್ಟು 1 ಲಕ್ಷ ಮನೆಗಳನ್ನು ಕಟ್ಟಲಾಗುವುದು. 1995-96 ಕೇಂದ್ರ ಬಜೆಟ್ಟಿನಲ್ಲಿ ಭಾರತ ಸರ್ಕಾರ ಪ್ರಕಟಿಸಿದಂತೆ ಹೆಚ್ಚಿನ ಹಣ ದೊರೆತಲ್ಲಿ ಇಂದಿರಾ ಅವಾಸ್ ಯೋಜನೆಯ ಅಡಿಯಲ್ಲಿ ಮನೆಗಳ ನಿರ್ಮಾಣದ ಗುರಿಯನ್ನು ಅಷ್ಟರಮಟ್ಟಿಗೆ ಹೆಚ್ಚಿಸಲಾಗುವುದು. ಮನೆ ಇಲ್ಲದವರಿಗೆ ನಿವೇಶನಗಳನ್ನೂ ಮತ್ತು ಮನೆಗಳನ್ನು ಒದಗಿಸುವಲ್ಲಿ ಖಾಸಗಿ ವಲಯಗಳೂ ಪಾಲ್ಗೊಳ್ಳುವಂತೆ ಅನುವು ಮಾಡಿಕೊಡಲು ಭೂಸುಧಾರಣ ಕಾಯ್ದೆಗೆ ಅವಶ್ಯಕ ತಿದ್ದುಪಡಿ.

*- ಕರ್ನಾಟಕ ವಾರ್ತೆ*

# ಗ್ರಾಮಪಂಚಾಯತ್‌ನಲ್ಲಿ ಮಹಿಳೆ

ಭಾರತದ ರಾಜಕೀಯ ಇತಿಹಾಸದಲ್ಲಿ ಮಹಿಳೆ ತೀರಾ ನಗಣ್ಯಳೇನಲ್ಲ. ರಾಜ-ಮಹಾರಾಜರ ಕಾಲದಲ್ಲಿ, ನಂತರ ಸ್ವಾತಂತ್ರ್ಯ ಹೋರಾಟದ ಸಂದರ್ಭಗಳಲ್ಲಿ ಸಾವಿರಾರು ಮಹಿಳೆಯರು ರಾಜಕೀಯ ಪ್ರಕ್ರಿಯೆಗಳಲ್ಲಿ ಭಾಗವಹಿಸಿದ್ದಾರೆ; ನಿರ್ಣಾಯಕ ಪಾತ್ರ ವಹಿಸಿದ್ದಾರೆ. ಸ್ವಾತಂತ್ರ್ಯ ಹೋರಾಟದ ಜೊತೆಜೊತೆಗೆ ಸ್ತ್ರೀ-ಪುರುಷರಿಬ್ಬರಿಗೂ ಸಮಾನವಾದ ರಾಜಕೀಯ ಸ್ವಾತಂತ್ರ್ಯ ದೊರಕಬೇಕು ಎಂದೂ ಹೋರಾಡಿದ್ದಾರೆ. ಅದಕ್ಕೆ ಅಂದು ಸಮಾಜದ ಬೆಂಬಲವೂ ಇತ್ತು.

ಆದರೆ ಚರಿತ್ರೆಯ ಪುಸ್ತಕಗಳು ಮಹಿಳೆಯರ ಬಗೆಗಿನ ಎಂದಿನ 'ಉದಾಸೀನತೆ'ಯಿಂದ ಈ ಮಹಿಳೆಯರ ಕೊಡುಗೆಯನ್ನು ನಿರ್ಲಕ್ಷಿಸಿದೆ. ಸ್ವಾತಂತ್ರ್ಯಾನಂತರ ದೊರಕಿದ ಅಧಿಕಾರದ ಅವಕಾಶ ಬಾಚಿಕೊಳ್ಳುವ ಪೈಪೋಟಿಯಲ್ಲಿ ಪುರುಷವರ್ಗ ಮಹಿಳೆಯರನ್ನು ಹಿಂದಿಕ್ಕಿ ತಾನು ಮುನ್ನುಗ್ಗಿತು. ದೇಶದ ಸ್ವಾತಂತ್ರ್ಯದ ಜೊತೆಜೊತೆಗೆ ಸಮಾನತೆಗಾಗಿಯೂ ಹೋರಾಡುತ್ತಿದ್ದ ಮಹಿಳೆಯರು ಸ್ವಾತಂತ್ರ್ಯಾನಂತರ ಸಮಾನತೆಯ ಹೋರಾಟಕ್ಕೆ ಸೀಮಿತಗೊಂಡರು. ಮಹಾಪೂರದಂತೆ ಎದ್ದು ಬಂದಿದ್ದ ಮಹಿಳಾ ಶಕ್ತಿಯನ್ನು ಸರಿಯಾದ ದಿಕ್ಕಿನಲ್ಲಿ ಕೊಂಡೊಯ್ಯುವ ನಾಯಕತ್ವ ಹಾಗೂ ಅಖಂಡವಾದ ಹೋರಾಟಗಳು ಇಲ್ಲವಾಗಿದ್ದರಿಂದ ಮಹಿಳಾ ಚಳವಳಿ ಮೊನಚು ಕಳೆದುಕೊಂಡಿತು. ಆ ಮಹಾಪೂರ ಬರಬರುತ್ತಾ ಇಳಿದುಹೋಯಿತು.

ಬದಲಾದ ಇಂದಿನ ಪರಿಸ್ಥಿತಿಯಲ್ಲಿ ಎಲ್ಲ ಕ್ಷೇತ್ರಗಳಲ್ಲಿ ಮಹಿಳೆ ಕಾಣುತ್ತಿದ್ದಾಳೆ, ದಾಪುಗಾಲು ಇಡುತ್ತಿದ್ದಾಳೆ. ಆದರೆ ನೀತಿ-ನಿರೂಪಣಾ ಸ್ಥಾನಗಳಲ್ಲಿ, ಶಾಸನ ರೂಪಿಸುವ ಸಂಸ್ಥೆಗಳಲ್ಲಿ ಅವಳ ಅನುಪಸ್ಥಿತಿ ಎದ್ದು ಕಾಣುತ್ತಿದೆ. ಹಿಂದೊಮ್ಮೆ ಮಹಿಳೆಗೆ ಮೀಸಲಾತಿ ಬೇಡ ಸಮಾನತೆ ಬೇಕು ಎಂದಿದ್ದ ಸಂಘಟನೆಗಳು ಇಂದು ರಾಜಕೀಯ ಮೀಸಲಾತಿಯು ಸಮಾನತೆಯ ಕಡೆಗೆ ಒಂದು ಹೆಜ್ಜೆ ಎಂದು ಪರಿಗಣಿಸಿವೆ. ಅಂತೆಯೇ, ಸಮಾಜದ ಉದ್ದೇಶಪೂರ್ವಕ ಉದಾಸೀನತೆಗೆ, ನಿರ್ಲಕ್ಷಕ್ಕೆ ಸೆಡ್ಡು ಹೊಡೆದ ಮಹಿಳೆಯರು ಪಂಚಾಯತ್ ಸಂಸ್ಥೆಗಳಲ್ಲಿ ಮೀಸಲಾತಿಯ ಮೂಲಕ ಮತ್ತೆ ರಾಜಕೀಯ ಪ್ರವೇಶ ಮಾಡಿದ್ದಾರೆ. ಚುನಾವಣೆಯಲ್ಲಿ ಆಯ್ಕೆಯಾಗಿ ಬಂದಿರುವ ಲಕ್ಷಾಂತರ ಮಹಿಳೆಯರು ದೇಶದ ಸಾಮಾಜಿಕ ಹಾಗೂ ರಾಜಕೀಯ ಇತಿಹಾಸಕ್ಕೆ ಹೊಸ ತಿರುವು ನೀಡುತ್ತಿದ್ದಾರೆ.

ಮಹಿಳೆಯರ ಈ ಪುನರಾಗಮನದ ಹಾದಿ ದುರ್ಗಮವಾಗಿದೆ. ಹಿಂದಿನಂತೆ ಒಂದೇ ಗುರಿ, ಏಕಶತ್ರು, ಏಕನಾಯಕತ್ವ ಇಂದಿಲ್ಲ. ಅಧಿಕಾರದ ಆಸೆ, ಅನಾರೋಗ್ಯಕರ ಸ್ಪರ್ಧೆ, ಕುಟಿಲತೆ, ಹಣಬಲತೋಳ್ಬಲಗಳ ಬೀಡಾದ ರಾಜಕೀಯ ಮಹಿಳೆಯರನ್ನು ಹಿಮ್ಮೆಟ್ಟಿಸಲು ಯತ್ನಿಸುತ್ತಿವೆ. ಆದರೆ ಇಂತಹ ಪ್ರತಿಕೂಲ ಪರಿಸರದಲ್ಲೂ ದಿನೇ ದಿನೇ ಬೆಳೆಯುತ್ತಿರುವ ಮಹಿಳೆಯರು ಸಾಮಾಜಿಕ ಬದಲಾವಣೆಯ ಅಲೆಯನ್ನು ಎಬ್ಬಿಸಿದ್ದಾರೆ.

ಅನಕ್ಷರಸ್ಥರು, ಅಜ್ಞಾನಿಗಳು, ಅಬಲೆಯರು ಎಂಬೆಲ್ಲ ಟೀಕೆಗಳಿಗೆ ಉತ್ತರವಾಗಿ ತಮ್ಮ ಹಳ್ಳಿಗಳನ್ನೇ ಅಕ್ಷರದ ಕಡೆಗೆ, ಜ್ಞಾನದ ಕಡೆಗೆ, ಸದೃಢತೆಯ ಕಡೆಗೆ ಕೊಂಡೊಯ್ಯುತ್ತಿದ್ದಾರೆ.

ಸಂವಿಧಾನದ 73 ಮತ್ತು 74ನೇ ತಿದ್ದುಪಡಿ ಕಾಯಿದೆಗಳು ಜಾರಿಗೆ ಬಂದಾಗ ಮಹಿಳೆಯರ ರಾಜಕೀಯ ಪ್ರವೇಶ ಕುರಿತು ದೇಶದ ಉದ್ದಗಲಕ್ಕೂ ಚರ್ಚೆ, ವಾದ-ವಿವಾದ, ವಿಮರ್ಶೆಗಳಾದವು. ಆರಂಭದ 'performance' ಬಗ್ಗೆ ಅನುಮಾನದ ದನಿಯ ಸುದೀರ್ಘ ವಿಮರ್ಶೆಗಳು ಬಂದವು. ಅಂದು, ಅಲ್ಲಲ್ಲಿ ಕಂಡು ಬಂದ ಲೋಪ-ದೋಷಗಳು 'ಸಾರ್ವಕಾಲಿಕವಾದದ್ದು, ಸರ್ವವ್ಯಾಪಿಯಾದದ್ದು' ಎಂಬಂತೆ ಚಿತ್ರಿತವಾದವು.

ಆದರೆ, ನಿಜಸ್ಥಿತಿ ಬೇರೆಯೇ ಇದೆ. ಚುನಾವಣೆಗೆ ನಿಲ್ಲಿಸಲು ಅಷ್ಟೊಂದು ಮಹಿಳೆಯರು ಸಿಗುತ್ತಾರಾ ಎನ್ನುವವರಿಗೆ ಉತ್ತರವಾಗಿ ಶೇ. 33ರನ್ನು ಮೀರಿ ಮಹಿಳೆಯರು ಆಯ್ಕೆಯಾಗಿದ್ದಾರೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಕೆಳಮಟ್ಟದಿಂದ ಯೋಜನೆ ರೂಪಿಸುವುದು ಸರಿಯಾದ ಕ್ರಮ ಎಂದು ತೋರಿಸಿಕೊಟ್ಟಿದ್ದಾರೆ. ಹತ್ತು-ಹಲವು ಕಡೆ ಸಂಪೂರ್ಣ ಮಹಿಳಾ ಪಂಚಾಯತ್‌ಗಳನ್ನು ರಚಿಸಿಕೊಂಡು ಹೊಸ ವ್ಯವಸ್ಥೆಗೆ ನಾಂದಿ ಹಾಡಿದ್ದಾರೆ. ಇದೆಲ್ಲಕ್ಕೆ ಕಿರೀಟವಿಟ್ಟಂತೆ ನೆರೆಯ ಆಂಧ್ರದ ಕುಲ್ವಾ ಗ್ರಾಮ ಪಂಚಾಯತ್‌ನ ಸರಪಂಚ್ ಫಾತಿಮಾ ಬಿ ತನ್ನ ಉತ್ತಮ ಕೆಲಸಕ್ಕಾಗಿ ವಿಶ್ವ ಸಂಸ್ಥೆಯ ಪ್ರಶಸ್ತಿ ಗಳಿಸಿದ್ದಾಳೆ.

ಈ ಅದ್ಭುತ ಬೆಳವಣಿಗೆಗಳನ್ನು, ಬದಲಾವಣೆಗಳನ್ನು ಜನರ ಬಳಿಗೆ ಕೊಂಡೊಯ್ಯಬೇಕು, ಮಹಿಳೆಯರ ಸಾಧನೆಯನ್ನು ಸರಿಯಾದ ವಿಮರ್ಶೆಗೆ ತೆರೆದಿಡಬೇಕು ಎಂಬುದು 'ಅಚಲ'ದ ಆಶಯ.

ಕರ್ನಾಟಕದಲ್ಲಿ ಇದೇ ಫೆಬ್ರವರಿ ಅಂತ್ಯದಲ್ಲಿ ಪಂಚಾಯತ್ ಚುನಾವಣೆ ನಡೆಯಬೇಕಿತ್ತು. ಆದರೆ, 'ಆಡಳಿತಾತ್ಮಕ ಅನುಕೂಲಕ್ಕಾಗಿ ಪಂಚಾಯತ್‌ಗಳ ಪುನರ್ರಚನೆ ಮಾಡಬೇಕು, ಅದಕ್ಕಾಗಿ ಸಂವಿದಾನ ತಿದ್ದುಪಡಿಯಾಗಬೇಕು' ಎಂಬ ನೆಪಹೂಡಿ ಆಡಳಿತ ಪಕ್ಷ ಚುನಾವಣೆಗಳನ್ನು ಮುಂದೂಡಿದೆ. ಅಧಿಕಾರ ವಿಕೇಂದ್ರೀಕರಣದ ಈ ಸಂಸ್ಥೆಗಳನ್ನು ತಮ್ಮ ಲಾಭಕ್ಕೆ ಬಳಸಿಕೊಳ್ಳುವ ಈ ರಾಜಕೀಯ ತಂತ್ರಗಾರಿಕೆಯನ್ನು 'ಅಚಲ' ಖಂಡಿಸುತ್ತದೆ.

* * *

ಪಂಚಾಯತ್ ಸಂಸ್ಥೆಗಳಲ್ಲಿ ಮಹಿಳೆಯರ ಪಾತ್ರ ಕುರಿತಾದ ಈ ವಿಶೇಷ ಸಂಚಿಕೆ ಹೊರಬರಲು ಮೂಲಕಾರಣ ಗೆಳತಿ ಎನ್. ಗಾಯತ್ರಿ ಹಾಗೂ ಅಚಲದ ಸಂಪಾದಕೀಯ ಬಳಗ; ಈ ವಿಷಯ ಕುರಿತು ಅಧ್ಯಯನ ಮಾಡಲು ಹಚ್ಚಿದ್ದು ಗುಲ್ಬರ್ಗದ ಎಂ.ಎಸ್.ಐ. ಕಾಲೇಜಿನ ಪ್ರಾಧ್ಯಾಪಕರಾದ ಶಾಂತಾ ಮತ್ತು ಗಾಯತ್ರಿ; ಇಂತಹ ನನ್ನೆಲ್ಲ ಕೆಲಸಗಳಿಗೆ ಬೆನ್ನಿಗೆ ನಿಲ್ಲುವುದು ಜಿ.ಎನ್. ನಾಗರಾಜ್ ಮತ್ತು ಶಿವರಾಂ ಪೈಲೂರ್; ಮಹಿಳಾ ಚಳವಳಿಯೊಂದಿಗೆ ಸಂಪರ್ಕ ಕಲ್ಪಿಸಿ ನಾನು ಬೆಳೆಯುವಂತೆ ಮಾಡಿದ್ದು ಜನವಾದಿ ಮಹಿಳಾ ಸಂಘಟನೆ; ಈ ಕೆಲಸಕ್ಕಾಗಿ ನನಗೆ ಬಿಡುವು ಮಾಡಿಕೊಟ್ಟು ಮನೆ ಕೆಲಸದ ಹೊರೆ ಕಡಿಮೆ ಮಾಡಿದ್ದು ಅಜ್ಜಿ ಮುನೇಶ್ವರಮ್ಮ.... ಈ ಎಲ್ಲರಿಗೆ ನನ್ನ ಕೃತಜ್ಞತೆಗಳು.

***- ಎಸ್. ಸತ್ಯಾ***

# ಎದೆ ಹಾಲು ಮಕ್ಕಳಿಗೆ ಪರಿಪೂರ್ಣ ಆಹಾರ

ಮಕ್ಕಳಿಗೆ ಎದೆ ಹಾಲು ಒಂದು ಪರಿಪೂರ್ಣ ಮತ್ತು ಆದರ್ಶವಾದ ಆಹಾರ. ಎದೆ ಹಾಲು ಉಂಡು ಬೆಳೆದ ಮಕ್ಕಳು ಉಳಿದ ಆಹಾರಗಳನ್ನು ಬಳಸಿದ ಮಕ್ಕಳಿಗಿಂತ ಖಾಯಿಲೆ ಬೀಳುವುದಾಗಲಿ ಪೌಷ್ಟಿಕಾಂಶಗಳ ಕೊರತೆಯಿಂದ ಬಳಲುವುದು ಕಡಿಮೆ. ವಿಶೇಷವಾಗಿ ಬಡ ಸಮುದಾಯಗಳಲ್ಲಿ ಬಾಟಲಿ ಮೂಲಕ ಹಾಲುಣಿಸುವುದು ಲಕ್ಷಾಂತರ ಮಕ್ಕಳ ಪ್ರಾಣ ಮತ್ತು ಆರೋಗ್ಯಕ್ಕೆ ಗಂಭೀರ ಗಂಡಾಂತರವನ್ನೊಡುತ್ತದೆ.

ಮೊದಲ ನಾಲ್ಕರಿಂದ ಆರು ತಿಂಗಳವರೆಗೆ ಮಗುವಿಗೆ ಎದೆ ಹಾಲೊಂದೆ ಅತ್ಯಂತ ಉತ್ತಮ ಆಹಾರ. ಎದೆ ಹಾಲುಣಿಸುವಿಕೆಯ ಕೆಲವು ಮುಖ್ಯ ಅಂಶಗಳನ್ನು ಗಮನದಲ್ಲಿಡಬೇಕು.

1. ಪ್ರತಿ ತಾಯಿಯು ತನ್ನ ಮಗುವಿಗೆ ಎದೆ ಹಾಲುಣಿಸಬಹುದು. ಮಗು ಹುಟ್ಟಿದ ತಕ್ಷಣ ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ [ಅರ್ಧ ಗಂಟೆಯೊಳಗಾಗಿ] ಮಗುವಿಗೆ ತಾಯಿ ಎದೆ ಹಾಲುಣಿಸಬೇಕು.
2. ಬಾಟಲಿ ಮೂಲಕ ಕುಡಿಸುವುದು ಗಂಭೀರ ಖಾಯಿಲೆಗಳಿಗೆ ದಾರಿ ಮಾಡಬಹುದು. ಅತಿಸಾರ ಬರಬಹುದು ಹಾಗೂ ಮಗುವಿನ ಸಾವಿಗೆ ಕಾರಣವಾಗಬಹುದು.
3. ಮಗು 2 ವರ್ಷಕ್ಕೆ ಕಾಲಿಟ್ಟಾಗಲೂ ಅದಕ್ಕೆ ಎದೆ ಹಾಲುಣಿಸುವದನ್ನು ಮುಂದುವರಿಸಬೇಕು.
4. ಎದೆ ಹಾಲುಣಿಸುವುದರಿಂದ ಪೌಷ್ಟಿಕಾಂಶ ಹೆಚ್ಚಿ ರೋಗ ನಿರೋಧಕ ಶಕ್ತಿ ಮಗುವಿನಲ್ಲಿ ಉತ್ಪನ್ನವಾಗುತ್ತದೆ. ಆಗತಾನೆ ಹುಟ್ಟಿದ ಮಗುವಿಗೆ ಎದೆ ಹಾಲನ್ನಲ್ಲದೆ ಮತ್ತೇನನ್ನು ಅಂದರೆ ನೀರು, ಸಕ್ಕರೆ ನೀರು, ಗ್ಲೂಕೋಸ್ ನೀರು, ಎಣ್ಣೆ, ಜೇನುತುಪ್ಪ ವಿಟಮಿನ್ ಹನಿಗಳನ್ನು ಟಾನಿಕ್‌ಗಳನ್ನು ಕೊಡಬಾರದು.

*- ಕರ್ನಾಟಕ ವಾರ್ತೆ*

# ಪಂಚಾಯತ್‌ಗಳಲ್ಲಿ ಮಹಿಳೆಯರು: ಪರಿವರ್ತನೆಯ ಹರಿಕಾರರು

- ಸತ್ಯಾ ಎಸ್.

"ಈಗ ಚುನಾಯಿತರಾಗುವ ಮಹಿಳೆಯರಿಗೆ ಸಿದ್ಧ ಮಾದರಿಗಳಲ್ಲಿ ಅವರಿಗೆ ಅವರೇ ಮಾದರಿಗಳಾಗಬೇಕು. ನಮ್ಮ ತಾಯಂದಿರಾಗಲಿ, ಅಜ್ಜಿಯರಾಗಲಿ ಅಧಿಕಾರದ ಸ್ಥಾನಗಳಲ್ಲಿ ಇದ್ದವರಲ್ಲ. ಹೀಗಾಗಿ ತಮ್ಮದೇ ಕುಟುಂಬದವರಿಂದ, ಸಮಾಜದಿಂದ ಹಾಗೂ ಮಾಧ್ಯಮಗಳಿಂದ ಈ ಮಹಿಳೆಯರು ಸಾಕಷ್ಟು ಟೀಕೆ, ಮೂದಲಿಕೆಗಳನ್ನು ಎದುರಿಸಬೇಕಾಗುತ್ತದೆ"

- ಮೃಣಾಲ್ ಪಾಂಡೆ, ಹಿರಿಯ ಪತ್ರಕರ್ತೆ.

ಸಂವಿಧಾನದ 73ನೇ ತಿದ್ದುಪಡಿ ಕಾಯಿದೆಯಿಂದಾಗಿ ದೇಶದಾದ್ಯಂತ ಒಂದು ಮಿಲಿಯನ್‌ಗೂ ಹೆಚ್ಚಿನ ಮಹಿಳೆಯರು ಪಂಚಾಯತ್ ರಾಜ್ ಸಂಸ್ಥೆಗಳಿಗೆ ಚುನಾಯಿತರಾಗಿ ಬಂದಾಗ ಮೃಣಾಲ್ ಪಾಂಡೆ ಈ ಮಾತು ಹೇಳಿದರು.

ಅದು ಸಂಪೂರ್ಣ ಸತ್ಯವಾಗಿತ್ತು.

ಎಲ್ಲ ಪಂಚಾಯತ್ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಮೂರನೇ ಒಂದು ಭಾಗ ಮೀಸಲಾತಿ ನೀಡಬೇಕೆಂಬ ಸಂವಿಧಾನ ತಿದ್ದುಪಡಿ ಮಸೂದೆ ಮಂಡನೆಯಾದಾಗ ಅಂತಹ ಪ್ರತಿರೋಧವೇನೂ ಬಂದಿರಲಿಲ್ಲ. ಎಲ್ಲ ರಾಜ್ಯಗಳೂ ಆ ಕಾಯಿದೆಯನ್ನು ಜಾರಿಗೆ ತಂದವು. 'ಕ್ರಾಂತಿಕಾರಿ' ಕ್ರಮ ಎನ್ನುತ್ತಾ ಎಲ್ಲ ಪಕ್ಷಗಳೂ ಖುಷಿ ವ್ಯಕ್ತಪಡಿಸಿದವು. ಆದರೆ, ಕಾಯಿದೆ ಜಾರಿಗೆ ಬಂದ ನಂತರ ಮೀಸಲಾತಿಯ ಮಿತಿಯನ್ನು ಮೀರಿಸಿ ಅಸಂಖ್ಯಾತ ಮಹಿಳೆಯರು ಚುನಾಯಿತರಾದಾಗ, ಗ್ರಾಮಗಳ ರಾಜಕೀಯ ಚಿತ್ರಣವನ್ನ, ಸಾಮಾಜಿಕ-ಆರ್ಥಿಕ ನೆಲೆಯನ್ನ, 'ಹಣ ಮತ್ತು ಜಾತಿ'ಯನ್ನಾಧರಿಸಿದ್ದ ಅಧಿಕಾರದ ಪ್ರಾಬಲ್ಯವನ್ನ ಅಲುಗಾಡಿಸಿದಾಗ 'ಪುರುಷ ಸಮಾಜ' ದಿಢೀರನೆ ಎಚ್ಚರಗೊಂಡಿತು.

ಮೀಸಲಾತಿ ಮೂಲಕ ಮಹಿಳೆಯರಿಗೆ ಅಧಿಕಾರ ನೀಡಿದ್ದು ಒಂದು ರಾಷ್ಟ್ರೀಯ ಅನಾಹುತ ಎಂಬಂತೆ ಬೊಬ್ಬೆ ಇಟ್ಟರು. ಮಹಿಳೆಯರು ಅನಕ್ಷರಸ್ಥರು, ಅಜ್ಞಾನಿಗಳು, ಅಬಲೆಯರು. ರಾಜಕೀಯ ಅವರಿಗಲ್ಲ. ಅವರು ರಾಜಕೀಯಕ್ಕೆ ಇಳಿದರೆ ಮನೆಯ ಗತಿಯೇನು? ಮಕ್ಕಳು ಹಿರಿಯರನ್ನು ಸಾಕುವರ್‍ಯಾರು? 'ಸಂಸ್ಕೃತಿ' ಕಾಪಾಡುವರಾರು? ಎಂದೆಲ್ಲಾ ಗೋಳಾಡಿದರು. ಇದಕ್ಕೆಲ್ಲ ಜಗ್ಗದಿದ್ದಾಗ, ಪ್ರಾಕ್ಸಿ ರಾಜಕಾರಣ ನಡೆಯುತ್ತಿದೆ, ಮೇಲ್ವರ್ಗದ - ಮೇಲ್ಜಾತಿಯ ಮಹಿಳೆಯರು ಮಾತ್ರ ಮುಂದೆ ಬರುತ್ತಾರೆ ಎಂದು ನೀತಿಯ ಮಾತನ್ನಾಡಿದರು.

ಇದಾವುದಕ್ಕೂ ಸೋಲದಿದ್ದಾಗ ಒಬ್ಬೊಬ್ಬ ಮಹಿಳೆಯನ್ನೇ ಗುರಿಯನ್ನಾಗಿಟ್ಟುಕೊಂಡು ಆ ಮಹಿಳೆಯರು ಕೆಲಸ ಮಾಡದಂತಹ ಪರಿಸರ ಸೃಷ್ಟಿಸಲು ತೊಡಗಿದರು. ಅವರ ಕೆಲಸಗಳಿಗೆ ಅಡ್ಡಗಾಲು ಹಾಕುವುದು, ಯೋಜನೆಗಳಿಗೆ ಕತ್ತರಿ ಹಾಕಿಸುವುದು ಮುಂತಾದ ವಾಮಮಾರ್ಗಗಳನ್ನು ಬಳಸುತ್ತಿದ್ದಾರೆ. ಇದಾವುದಕ್ಕೂ ಜಗ್ಗದೆ ಮುಂದೆ ಸಾಗುತ್ತಲೇ ಇರುವ ಮಹಿಳೆಯರನ್ನು, ಅವರ ಆತ್ಮಸ್ಥೈರ್ಯವನ್ನು, ಮುಂದಾಳತ್ವವನ್ನು, ಸಾಮರ್ಥ್ಯವನ್ನು, ಸುತ್ತಲಿನ ಸಮಾಜ ಇಂತಹ ಮಹಿಳೆಯರನ್ನು ನಿಧಾನವಾಗಿ ಒಪ್ಪಿಕೊಳ್ಳುವುದನ್ನು ನೋಡಿ ಹತಾಶೆಗೊಂಡ ಹಲವರು ದೈಹಿಕ ಹಲ್ಲೆಗೆ, 'ಶೀಲಹರಣ'ದಂತಹ ನೀಚ ಪ್ರವೃತ್ತಿಗೆ ಇಳಿದಿದ್ದಾರೆ.

ಮೃಣಾಲ್ ಪಾಂಡೆ ಹೇಳಿದಂತೆ ಪಂಚಾಯತ್ ಸಂಸ್ಥೆಗಳಿಗೆ ಆಯ್ಕೆಯಾದ ಮಹಿಳೆಯರು ಕುಟುಂಬದ ಸದಸ್ಯರಿಂದ, ನೆಂಟರಿಂದ, ಸುತ್ತಲಿನ ಸಮಾಜದಿಂದ, ರಾಜಕೀಯ ಎದುರಾಳಿಗಳಿಂದ, ಇವೆಲ್ಲವನ್ನೂ ವೈಭವೀಕರಿಸುವಂತೆ ಪತ್ರಿಕೆಗಳಿಂದ ಟೀಕೆಗಳ ಮಹಾಪೂರವನ್ನೇ ಎದುರಿಸಬೇಕಾಯಿತು.

ಆರಂಭದ ದಿನಗಳಲ್ಲಿ ನಡೆದ ಸಣ್ಣಪುಟ್ಟ ದೋಷಗಳೂ ದೊಡ್ಡ ಪ್ರಮಾದಗಳಂತೆ ಚಿತ್ರಿತವಾದವು.

ನಮ್ಮದು ಹಳ್ಳಿಗಳ ದೇಶ. ಹಳ್ಳಿಗಳಲ್ಲಿ ಮಹಿಳೆಯರು ಇಂದಿಗೂ ದ್ವಿತೀಯ ದರ್ಜೆಯ ಪ್ರಜೆಗಳೇ. ಸದಾ ತಲೆಮೇಲೆ ಸೆರಗು ಹೊದ್ದು, ಮನೆಯ ನಾಲ್ಕು ಗೋಡೆಗಳ ನಡುವೆ ಬಂಧಿಯಾದವರು. ಅಪರಿಚಿತರು ಮನೆಯ ಅಂಗಳಕ್ಕೆ ಬಂದರೂ, ಮಹಿಳೆಯರು ಮುಖ ಮರೆಮಾಚಿ ಒಳಮನೆಯಲ್ಲಿ ಸೇರಬೇಕು. ಕುಟುಂಬದ ಜನರ ನಡುವೆ ಇದ್ದಾಗಲೂ ಗಂಡಸರ ಎದುರು ಇವರು ಕುಳಿತು ಕೊಳ್ಳುವಂತಿಲ್ಲ. ದನಿ ತೆಗೆದು ಮಾತನಾಡುವಂತಿಲ್ಲ. ಖುಷಿಯಾದರೆ ಮನತುಂಬಿ ನಗುವಂತಿಲ್ಲ. ತಲೆ ಎತ್ತಿ ಓಡಾಡುವಂತಿಲ್ಲ. ಇಂತಹ ಸಾಮಾಜಿಕ ಪರಿಸರದಿಂದ ಬಂದ ಮಹಿಳೆಯರು ಒಮ್ಮೆಲೇ ಏಕಾಂಗಿಯಾಗಿ ನಿಂತು ತನ್ನ ಜವಾಬ್ದಾರಿ ನಿರ್ವಹಿಸುವುದು ವಾಸ್ತವವಾಗಿ ಅಸಾಧ್ಯ. ಆದ್ದರಿಂದ ಇಂತಹ ಮಹಿಳೆಯರಿಗೆ ಕುಟುಂಬದ ಪುರುಷರ ನೆರವು ಅಗತ್ಯವಾಗಿತ್ತು. ಸಭೆಗೆ ಹೋಗಿ ಬರಲು ಜೊತೆ ಬೇಕಾಯ್ತು. ಈ 'ಜೊತೆ' ನೀಡುವುದು ಕೆಲವು ಕಡೆ ದುರುಪಯೋಗವಾದದ್ದು ನಿಜವಾದರೂ, 'ಜೊತೆ'

ನೀಡುವ ಅಗ್ರತ್ಯವನ್ನೇ ಪ್ರಶ್ನಿಸಿದ್ದು ವಾಸ್ತವದ ಅರಿವಿಲ್ಲದ ಹಸಿಹಸಿ ವಿಮರ್ಶೆಯಾಗಿತ್ತು.

ಇಂತಹ ಅನೇಕ 'ಹಸಿ' ವಿಮರ್ಶೆಗಳಿಂದಾಗಿ ಒಟ್ಟು 'ಸಾಮಾಜಿಕ ಪ್ರಕ್ರಿಯೆ'ಯಾಗಿ ಮೂಡಿ ಬರಬೇಕಾಗಿದ್ದ ಬದಲಾವಣೆಯ ಚಳವಳಿ 'ಕೇವಲ ಮಹಿಳೆಯರದಾಗಿ' ಬಿಂಬಿತಗೊಂಡಿತು. ಒಟ್ಟು ರಾಜಕೀಯ ವಾಹಿನಿಯಲ್ಲಿ ಮಹಿಳೆಯರನ್ನೂ ಸಮಭಾಗಿಗಳಾಗಿಸಬೇಕಿದ್ದ 'ಮೀಸಲಾತಿ'ಯ ಪ್ರಯತ್ನ, ಆರಂಭದ ಹಸಿ-ಬಿಸಿ ವಿಮರ್ಶೆಯಿಂದಾಗಿ ಮಹಿಳೆಯರನ್ನು ಮತ್ತಷ್ಟು ಪ್ರತ್ಯೇಕಿಸಿತು.

ಇಷ್ಟಾದರೂ, 'ಮೀಸಲಾತಿ'ಯನ್ನು ಅರ್ಥಪೂರ್ಣಗೊಳಿಸಲು, ದೊರೆತ ಅವಕಾಶವನ್ನು ಸದುಪಯೋಗಪಡಿಸಿಕೊಳ್ಳಲು ಅಸಂಖ್ಯಾತ ಮಹಿಳೆಯರು ಯತ್ನಿಸಿದ್ದಾರೆ ಹಾಗೂ ಸಫಲರಾಗಿದ್ದಾರೆ. ಕುಟುಂಬದ ಸಮಾಜದ ಸಹಕಾರ ದೊರೆತಿರುವ ಮಹಿಳೆಯರು, ಸ್ವಸಾಮರ್ಥ್ಯದಿಂದ ಮೇಲೆ ಬಂದಿರುವವರು, ಅಪೂರ್ವ ಸಂಘಟನಾ ಶಕ್ತಿ ಹೊಂದಿರುವವರು, ಚುನಾಯಿತರಾದ ಮೇಲೆ ಎಲ್ಲವನ್ನು ಕಲಿತು ಇತರರಿಗಿಂತ ಮುಂದೆ ಬಂದವರು, ಪಂಚಾಯತಿಗಳಲ್ಲಿ ಆದ್ಯತೆಗಳ ಪಟ್ಟಿಯನ್ನೇ ಬದಲಾಯಿಸಿದರು. ಹಳ್ಳಿಗಳಲ್ಲಿ ಬದಲಾವಣೆಯ ಸಣ್ಣ ಅಲೆಯನ್ನೇ ಹುಟ್ಟು ಹಾಕಿದವರೂ ನಮ್ಮ ನಡುವೆ ಇದ್ದಾರೆ.

ಪಂಚಾಯತ್ ಸಂಸ್ಥೆಗಳಲ್ಲಿ, ಅದರಲ್ಲೂ ಪ್ರಮುಖವಾಗಿ ಗ್ರಾಮ ಪಂಚಾಯತ್‌ಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಯಿಂದ ಅನೇಕ ಬದಲಾವಣೆಗಳು, ಸುಧಾರಣೆಗಳು ಆಗಿವೆ. ಈ ಬದಲಾವಣೆಗಳನ್ನು ಹಲವು ಹಂತಗಳಲ್ಲಿ ಗುರುತಿಸುವ ಅಗತ್ಯವಿದೆ.

ವೈಯಕ್ತಿಕ ನೆಲೆಯಲ್ಲಿ, ಚುನಾಯಿತರಾದ ಮಹಿಳೆಯರು ಆತ್ಮಸ್ಥೈರ್ಯವನ್ನು ಬೆಳೆಸಿಕೊಂಡಿದ್ದಾರೆ. ಮನೆಯ ಆವರಣದಿಂದ ಹೊರಬಂದು ಸಮಾಜದ ಎಲ್ಲ ವರ್ಗಗಳೊಂದಿಗೆ ಮಿಳಿತಗೊಂಡಂತೆಲ್ಲ ಅವರ ಅರಿವಿನ ಮಟ್ಟ ಹೆಚ್ಚಿದೆ.

ಹೆಚ್ಚಿದ ಮಾಹಿತಿ ಸಂಗ್ರಹಣೆ ಅವರ ಬೌದ್ಧಿಕ ಪ್ರಗತಿಗೆ ನೆರವಾಗಿದೆ. ಒಬ್ಬ ಪುರುಷ ಅಕ್ಷರಸ್ಥನಾದರೆ ಅದು ಒಬ್ಬ ವ್ಯಕ್ತಿ ಮಾತ್ರ ಅಕ್ಷರಸ್ಥನಾದಂತೆ. ಅದೇ ಒಬ್ಬ ಹೆಣ್ಣು ಮಗಳು ಅಕ್ಷರಸ್ಥಳಾದರೆ ಒಂದು ಕುಟುಂಬ ಅಕ್ಷರ ಜ್ಞಾನದ ಕಡೆಗೆ ಸಾಗುತ್ತದೆ" ಎನ್ನುವ ಹೇಳಿಕೆಯಂತೆ, ಅನೇಕ ಚುನಾಯಿತ ಮಹಿಳೆಯರು ತಾವು ಪಡೆದುಕೊಂಡ ಅರಿವನ್ನು, ಆತ್ಮಸ್ಥೈರ್ಯವನ್ನು ಇಡೀ ಕುಟುಂಬಕ್ಕೆ ಧಾರೆ ಎರೆದಿದ್ದಾರೆ. ಅವರ ಮನೆಯ ಮಕ್ಕಳು ಶಾಲೆಯ ಹಾದಿ ಹಿಡಿದಿವೆ. ಆರೋಗ್ಯ ಮತ್ತು ನೈರ್ಮಲ್ಯದ ಪಾಠಗಳನ್ನು ಊರಿಗೆ ಕಲಿಸುವ ಮೊದಲು ತಮ್ಮ ಮನೆಯಲ್ಲಿ ಆಚರಣೆಗೆ ತಂದಿದ್ದಾರೆ. ತಾವು ಕಲಿತುಬಂದ ಅನುಭವಗಳನ್ನು ಮನೆ ಮಂದಿಯೊಂದಿಗೆಲ್ಲ ಹಂಚಿಕೊಂಡು ಅವರುಗಳ ಅರಿವಿನ ವಿಸ್ತಾರಕ್ಕೂ ನಾಂದಿ ಹಾಡಿದ್ದಾರೆ.

'ಹೊಸ್ತಿಲು ದಾಟಿದ ಹೆಣ್ಣು' ಎಂಬ ಅನಾದರಕ್ಕೆ ತುತ್ತಾಗುತ್ತಿದ್ದ ಹೆಣ್ಣು ಮಕ್ಕಳು ಹೊಸ್ತಿಲಿನ ಹೊರಗಿರುವ ಅಪಾರ ಸಾಧ್ಯತೆಗಳನ್ನು ಹೊಸ್ತಿಲಿನ ಒಳಜಗತ್ತಿಗೂ ಪರಿಚಯಿಸುತ್ತಿದ್ದಾರೆ. ಈ ರೀತಿ ಎರಡು ಲೋಕಗಳ ನಡುವೆ ಸೇತುವೆಯಂತಿರುವುದರಿಂದ ನೆರೆಹೊರೆಯವರೂ ಈ 'ಹೊಸತ'ನ್ನು ತಮ್ಮದಾಗಿಸಿಕೊಳ್ಳುತ್ತಿದ್ದಾರೆ. ತಮ್ಮ ಬೇಡಿಕೆಗಳ ಈಡೇರಿಕೆಯ ನೆಪದಲ್ಲಿ ಈ ಹೆಣ್ಣು ಮಕ್ಕಳ ಸಂಪರ್ಕಕ್ಕೆ ಬರುವ ನೆರೆ-ಹೊರೆಯವರು ಬರಬರುತ್ತಾ ಈ ಸದಸ್ಯೆಯರ ಬೆಂಬಲಿಗರಾಗಿ ಬಂದಲಾಗುತ್ತಿದ್ದಾರೆ. ಈ ಸಹಚರ್ಯ ಅವರ ವೈಯಕ್ತಿಕ ಬದುಕಿನಲ್ಲೂ ನಿಧಾನಗತಿಯ ಬದಲಾವಣೆಗಳನ್ನು ತರುತ್ತಿದೆ.

ಇನ್ನು ಪಂಚಾಯತ್ ಸಭೆಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಯು ಸಭೆಗೆ ಗಾಂಭೀರ್ಯ ತಂದುಕೊಟ್ಟಿದೆ. ಕಾಡುಹರಟೆ, ಗಾಸಿಪ್‌ಗಳು, ಬಹಿರಂಗ ಅವ್ಯವಹಾರಗಳಿಗೆ ತಕ್ಕ ಮಟ್ಟಿಗೆ ಕಡಿವಾಣ ಬಿದ್ದಿದೆ. ಹಲವು ಅಧ್ಯಯನಗಳು ಬಹಿರಂಗ ಪಡಿಸಿರುವಂತೆ, "ಪಂಚಾಯತ್ ಸಭೆಗಳಲ್ಲಿ ಮೊದಲಿದ್ದ ಅಶ್ಲೀಲ ಪದಗಳ ಬಳಕೆ ಕಡಿಮೆಯಾಗುತ್ತಿದೆ. ಹೆಣ್ಣು ಮಕ್ಕಳನ್ನು ಕುರಿತು ಮಾತನಾಡುವಾಗ ಹಗುರವಾಗಿ ವರ್ತಿಸದೆ ಎಚ್ಚರಿಕೆ ವಹಿಸುತ್ತಿದ್ದಾರೆ."

ಪಶ್ಚಿಮ ಬಂಗಾಳದ ಕುಲ್ಪಿಕೋರಿ ಮಹಿಳಾ ಪಂಚಾಯತ್‌ನ ಕಾರ್ಯದರ್ಶಿ ಯೋಗೇಂದ್ರನಾಥ್ ಮೊಹತೊ ಹೇಳುತ್ತಾರೆ: "ಈ ಹಿಂದೆ ನಾನು ಕೆಲಸ ಮಾಡುತ್ತಿದ್ದ ಪಂಚಾಯತ್‌ಗಳಲೆಲ್ಲ ಗಂಡಸರು ತಮ್ಮ ಸಿಗರೇಟ್, ಪಾನ್‌ಬೀಡಗಳ ವೈಯಕ್ತಿಕ ಖರ್ಚನ್ನೂ ಪಂಚಾಯತ್ ಲೆಕ್ಕಕ್ಕೇ ಸೇರಿಸುತ್ತಿದ್ದರು. ಆದರೆ ಇಲ್ಲಿನ ಮಹಿಳೆಯರು ಹಣದ ವಿಷಯದಲ್ಲಿ ತುಂಬಾ ಅಚ್ಚುಕಟ್ಟು ಹಾಗೂ ಕೆಲಸದಲ್ಲಿ ನಿಷ್ಠಾವಂತರು"

"ಪಂಚಾಯತ್ ಸಂಸ್ಥೆಗಳಲ್ಲಿ ಮಹಿಳೆಯರ ಹೆಚ್ಚಿನ ಪಾಲ್ಗೊಳ್ಳುವಿಕೆಯಿಂದಾಗಿ ಗ್ರಾಮಗಳ ಆದ್ಯತೆ ಪಟ್ಟಿಯಲ್ಲಿ ಗಮನಾರ್ಹ ಬದಲಾವಣೆಗಳಾಗಿವೆ. ಆಡಳಿತಾತ್ಮಕ ಪ್ರಕ್ರಿಯೆಗಳು ಚುರುಕುಗೊಂಡಿವೆ ಹಾಗೂ ಪಂಚಾಯತ್

ಕಚೇರಿಗಳ ಕಾರ್ಯ ವೈಖರಿಯೇ ಬದಲಾಗಿದೆ" ಎನ್ನುತ್ತಾರೆ ಈ ಕುರಿತು ವ್ಯಾಪಕ ಅಧ್ಯಯನ ಮಾಡಿರುವ ಒರಿಸ್ಸಾದ ಸ್ನೇಹಲತಾ ಪಾಂಡಾ.

ತಮ್ಮ ಗ್ರಾಮದ ಅಭಿವೃದ್ಧಿಗೆ ಏನೇನು ಕೆಲಸಗಳಾಗಬೇಕು ಎಂಬ ಯೋಜನೆಯ ಪಟ್ಟಿಯಲ್ಲಿ ಮಹಿಳಾ ಸದಸ್ಯರ ಆದ್ಯತೆಗಳಿಗೂ ಪುರುಷ ಸದಸ್ಯರ ಆದ್ಯತೆಗಳಿಗೂ ಸಾಕಷ್ಟು ಅಂತರವಿದೆ. ಯಾವುದೇ ಪಂಚಾಯತ್‌ನ ಮಹಿಳಾ ಸದಸ್ಯರ ಆದ್ಯತೆಗಳು, ಕುಡಿಯುವ ನೀರಿನ ಸೌಲಭ್ಯ, ಮಕ್ಕಳಿಗೆ ಶಾಲೆ, ದುಡಿಯುವ ಅವಕಾಶಗಳ ಹೆಚ್ಚಳ, ಊರಿಗೆ ರಸ್ತೆ, ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಕುಟುಂಬ ಶಸ್ತ್ರ ಚಿಕಿತ್ಸಾ ಶಿಬಿರಗಳು, ಬಡವರಿಗೆ ಭೂಮಿ ಮತ್ತು ಮನೆ ವಿತರಣೆ - ಆಗಿರುತ್ತವೆ. ಈ ಆದ್ಯತೆಗಳು ಯಾವುದೇ ಒಂದು ಗ್ರಾಮದ ಸರ್ವಾಂಗೀಣ ಪ್ರಗತಿಗೆ ಅತ್ಯಂತ ಅವಶ್ಯಕವಾದ್ದರಿಂದ ಹಾಗೂ ಇವು ವಾಸ್ತವದ ನೆಲೆಗಟ್ಟಿಗೆ ಸಮೀಪವಾದ್ದರಿಂದ ಈ ಬೇಡಿಕೆಗಳು ಈಡೇರಿದ ಹಳ್ಳಿಗಳು ಪ್ರಗತಿಯ ಹಾದಿಯಲ್ಲಿವೆ ಎಂದು ಅಧ್ಯಯನಗಳು ಅಭಿಪ್ರಾಯಪಟ್ಟಿವೆ.

ಪಂಚಾಯತ್ ಸಂಸ್ಥೆಗಳಲ್ಲಿ ಒಂದು ಮಿಲಿಯನ್ ಮಹಿಳೆಯರ ಪ್ರವೇಶವು ರಾಜಕೀಯ ಪಕ್ಷಗಳಲ್ಲಿ ಹಾಗೂ ಪ್ರಜಾಪ್ರಭುತ್ವದ ಪ್ರಕ್ರಿಯೆಗಳಲ್ಲೂ ಮಹತ್ವದ ಬದಲಾವಣೆಗಳನ್ನು ತಂದಿದೆ.

ಪಂಚಾಯತ್ ಸಂಸ್ಥೆಗಳಿಗೆ ನಡೆಯುವ ಚುನಾವಣೆಗಳು ಪಕ್ಷಾಧಾರಿತವಲ್ಲದಿದ್ದರೂ, ರಾಜಕೀಯ ಸಿದ್ಧಾಂತಗಳಿಗೆ ಹಾಗೂ ಆ ಮೂಲಕ ರಾಜಕೀಯ ಪಕ್ಷಗಳೊಂದಿಗೆ ಸಂಬಂಧವಿದ್ದೇ ಇರುತ್ತದೆ.

ಹೀಗಾಗಿ ಚುನಾಯಿತ ಸ್ಥಾನಗಳಲ್ಲಿ ದಿಢೀರನೆ ಲಕ್ಷಾಂತರ ಮಹಿಳೆಯರು ಕಾಣಿಸಿಕೊಂಡಂತೆ ರಾಜಕೀಯ ಪಕ್ಷಗಳ ಸದಸ್ಯರಲ್ಲೂ ಮಹಿಳೆಯರ ಸಂಖ್ಯೆ ಹೆಚ್ಚಾಯಿತು. ಹೀಗೆ ಪಕ್ಷ ರಾಜಕಾರಣಕ್ಕೆ ಸೇರ್ಪಡೆಯಾದ ಮಹಿಳೆಯರಲ್ಲಿ ಅರ್ಧದಷ್ಟಾದರೂ ಮಹಿಳೆಯರು ರಾಜಕೀಯ ಪ್ರಜ್ಞೆ ಬೆಳೆಸಿಕೊಂಡಿದ್ದಾರೆ. ಹೆಚ್ಚೆಚ್ಚು ಮಹಿಳೆಯರು ರಾಜಕೀಯ ಚಟುವಟಿಕೆಗಳಲ್ಲೂ ತೊಡಗಿಸಿಕೊಂಡಿದ್ದರಿಂದಾಗಿ ರಾಜಕೀಯ ಪಕ್ಷಗಳೂ ಅವರಿಗೆ ಮನ್ನಣೆ ನೀಡಬೇಕಾಯಿತು. ಉನ್ನತ ಸ್ಥಾನಗಳಲ್ಲಿ ಇಲ್ಲವಾದರೂ, ಕೆಳಹಂತದ ಘಟಕಗಳಲ್ಲಿ ಅನೇಕ ಮಹಿಳೆಯರು ಸ್ಥಾನ ಪಡೆದರು.

ಕಳೆದ ಹತ್ತು ವರ್ಷಗಳಿಂದೀಚೆಗೆ ಚುನಾವಣೆಯಲ್ಲಿ ಸ್ಪರ್ಧಿಸಬಯಸುವ ಹಾಗೂ ಸ್ಪರ್ಧಿಸುವ ಮಹಿಳೆಯರ ಸಂಖ್ಯೆ ಅಗಾಧವಾಗಿ ಹೆಚ್ಚಿದೆ. ಉದಾಹರಣೆಗೆ 1991ರ ಲೋಕಸಭಾ ಚುನಾವಣೆಯಲ್ಲಿ ಒಟ್ಟು ಮಹಿಳಾ ಅಭ್ಯರ್ಥಿಗಳ ಸಂಖ್ಯೆ 325 ಇದ್ದದ್ದು 1996ರ ಚುನಾವಣೆಯಲ್ಲಿ 599ಕ್ಕೆ ಏರಿತು. ಈ ರೀತಿಯ ಹೆಚ್ಚಳ ಎಲ್ಲ ವಿಧಾನಸಭಾ ಚುನಾವಣೆಗಳಲ್ಲೂ ವ್ಯಕ್ತವಾಗಿದೆ.

"1993ರಲ್ಲಿ ಕರ್ನಾಟಕದಲ್ಲಿ ನಡೆದ ಪಂಚಾಯತ್ ಚುನಾವಣೆಯಲ್ಲಿ ಪ್ರತಿ ಒಂದು ಸ್ಥಾನಕ್ಕೆ 2.84 ಮಹಿಳಾ ಅಭ್ಯರ್ಥಿ ಕಣದಲ್ಲಿದ್ದರು" ಎನ್ನುತ್ತಾರೆ ಡಾ. ಎಂ. ವೆಂಕಟರೆಡ್ಡಿ 'ಕುರುಕ್ಷೇತ್ರ' ಎಂಬ ಪತ್ರಿಕೆಯಲ್ಲಿ.

ಇಷ್ಟೇ ಅಲ್ಲ, ಮಹಿಳೆಯರಿಗೆ ಮೀಸಲಿಟ್ಟಿದ್ದ ಶೇ. 33ರಷ್ಟು ಸ್ಥಾನಗಳನ್ನು ಮೀರಿ ಇನ್ನೂ ಹೆಚ್ಚಿನ ಸ್ಥಾನಗಳಲ್ಲಿ ಮಹಿಳೆಯರು ಆಯ್ಕೆಯಾಗಿ ಬಂದಿದ್ದಾರೆ. 'ಚುನಾವಣೆಗೆ ನಿಲ್ಲಿಸಲು ಶೇ. 33ರಷ್ಟು ಮಹಿಳೆಯರು ಸಿಗುವುದಿಲ್ಲ' ಎಂಬ ಆತಂಕಕ್ಕೆ ಉತ್ತರ ನೀಡಿದ್ದಾರೆ. ರಾಷ್ಟ್ರಮಟ್ಟದಲ್ಲಿ ಗ್ರಾಮಪಂಚಾಯತ್‌ಗಳಿಗೆ ಆಯ್ಕೆಯಾದ ಒಟ್ಟು ಮಹಿಳೆಯರ ಸಂಖ್ಯೆ ಶೇ. 35.9ರಷ್ಟಿದೆ. ಇದರಲ್ಲಿ ದಕ್ಷಿಣದ ನಾಲ್ಕು ರಾಜ್ಯಗಳ ಕೊಡುಗೆಯೇ ಅಧಿಕವಾಗಿದೆ. ತಾಲ್ಲೂಕು ಪಂಚಾಯತ್ ಚುನಾವಣೆಗಳಲ್ಲಿ ಶೇ. 40ರಷ್ಟು (59,688) ಮಹಿಳೆಯರು ಆಯ್ಕೆಯಾಗಿದ್ದರೆ, ಜಿಲ್ಲಾ ಪಂಚಾಯತ್‌ಗಳಲ್ಲಿ ಇವರ ಒಟ್ಟು ಪ್ರಮಾಣ ಶೇ. 39 (6,106) ಅಂದರೆ, ಮೂರು ಹಂತಗಳಲ್ಲೂ ಶೇ. 33ಕ್ಕಿಂತಲೂ ಅಧಿಕವೇ.

ಅದರಲ್ಲೂ ಕರ್ನಾಟಕದಲ್ಲಿ ಇತರೆ ಎಲ್ಲ ರಾಜ್ಯಗಳಿಗಿಂತ ಹೆಚ್ಚಿನ ಸಂಖ್ಯೆಯ ಮಹಿಳೆಯರು ಆಯ್ಕೆಯಾಗಿದ್ದಾರೆ. ಗ್ರಾಮಪಂಚಾಯತ್‌ಗಳಲ್ಲಿ ಶೇ. 46.7 (37,689) ತಾಲ್ಲೂಕು ಪಂಚಾಯತ್‌ಗಳಲ್ಲಿ ಶೇ. 40.2 (1,343) ಹಾಗೂ ಜಿಲ್ಲಾ ಪಂಚಾಯತ್‌ಗಳಲ್ಲಿ ಶೇ. 36.45 (335) ರಷ್ಟು ಮಹಿಳೆಯರಿದ್ದಾರೆ.

ಪಶ್ಚಿಮ ಬಂಗಾಳದಲ್ಲಿ ಚುನಾಯಿತ ಮಹಿಳೆಯರ ಸಂಖ್ಯೆ ಗಣನೀಯವಾಗಿ ಹೆಚ್ಚಿದೆ. 1983ರಲ್ಲಿ 379 ಇದ್ದ ಮಹಿಳೆಯರ ಸಂಖ್ಯೆ 1992ರಲ್ಲಿ 25,171ಕ್ಕೆ ಏರಿದೆ. ಅಂದರೆ ಶೇ. 66ರಷ್ಟು ಹೆಚ್ಚಳ.

ಈ ರೀತಿಯ ರಾಜಕೀಯ ಎಚ್ಚರ ಮತದಾನದ ಮೇಲೂ ತನ್ನ ಪ್ರಭಾವ ಬೀರಿದೆ. ಒಂದು ದಶಕದ ಹಿಂದೆ ಮತದಾರರ ಪಟ್ಟಿಯಲ್ಲಿ ಪುರುಷರೊಂದಿಗೆ ಸರಿಸಮಾನ ಸಂಖ್ಯೆಯಲ್ಲೇ ಮಹಿಳೆಯರಿದ್ದರೂ ಮತದಾನದಲ್ಲಿ ಎಲ್ಲರೂ ಪಾಲ್ಗೊಳ್ಳುತ್ತಿರಲಿಲ್ಲ. ಆದರೆ ಇಂದು ಮತದಾನ ಮಾಡುವ ಮಹಿಳೆಯರ ಸಂಖ್ಯೆ ಹಿಂದೆಂದಿಗಿಂತಲೂ ಹೆಚ್ಚಾಗಿದೆ. ಪಶ್ಚಿಮ ಬಂಗಾಳ, ಕೇರಳ ಹಾಗೂ ನಮ್ಮ ರಾಜ್ಯದ ದಕ್ಷಿಣ ಕನ್ನಡ

ಜಿಲ್ಲೆಗಳ ಅನೇಕ ಕ್ಷೇತ್ರಗಳಲ್ಲಿ ಮಹಿಳಾ ಮತದಾರರ ಸಂಖ್ಯೆ ಹಾಗೂ ಮತದಾನ ಮಾಡುವ ಮಹಿಳೆಯರ ಸಂಖ್ಯೆ ಪುರುಷರಿಗಿಂತಲೂ ಅಧಿಕವಾಗಿದೆ.

ಮಹಿಳೆಯರ ರಾಜಕೀಯ ಪಾಲ್ಗೊಳ್ಳುವಿಕೆಯ ಹೆಚ್ಚಳದಿಂದಾದ ಮತ್ತೊಂದು ಮಹತ್ತರ ಬೆಳವಣಿಗೆ ಎಂದರೆ ಮಹಿಳೆಯರು 'ಮತದಾನ' ಕುರಿತು ಸ್ವಯಂ ನಿರ್ಧಾರ ಕೈಗೊಳ್ಳುತ್ತಿರುವುದು. ಸಾಧಾರಣವಾಗಿ ಮಹಿಳೆಯರ ಮತಗಳು ಕುಟುಂಬದ ಪುರುಷ ಸದಸ್ಯರ ಸೂಚನೆಗೆ ಅನುಗುಣವಾಗಿ ಇರುತ್ತಿದ್ದವು. ಧರ್ಮ, ಜಾತಿಯನ್ನು ಆಧರಿಸಿರುತ್ತಿದ್ದವು. ಆದರೆ ಬದಲಾದ ಈಗಿನ ದಿನಗಳಲ್ಲಿ ಬಹುತೇಕ ಮಹಿಳೆಯರು ತಮ್ಮ ಮತ ಯಾರಿಗೆ ಹಾಕಬೇಕು ಎಂಬುದನ್ನು ತಾವೇ ನಿರ್ಧಾರ ಮಾಡುತ್ತಿದ್ದಾರೆ. ಅನೇಕ ಸಂದರ್ಭಗಳಲ್ಲಿ ತಮ್ಮ ಮತದಾನವನ್ನು ಗುಪ್ತವಾಗಿಯೂ ಇಡುತ್ತಾರೆ. ಪ್ರಜಾಪ್ರಭುತ್ವ ಪ್ರಕ್ರಿಯೆಯ ಅಡಿಗಲ್ಲಾದ ಮತದಾನದಲ್ಲಿ ಅರ್ಧದಷ್ಟು ಸಂಖ್ಯೆಯ ಮತದಾರರು ಸ್ವತಂತ್ರರಾಗಿ ಮತ ಚಲಾಯಿಸುವತ್ತ ಹೆಜ್ಜೆ ಹಾಕುತ್ತಿದ್ದಾರೆ ಎನ್ನುವುದು ಸಾಧಾರಣವಾದ ಬದಲಾವಣೆಯಲ್ಲ.

ಗುಜರಾತಿನ ಉದಯಪುರ ಜಿಲ್ಲೆಯ ಕೋಟ್ರಾ ಗ್ರಾಮದಲ್ಲಿರುವ ಗುಡ್ಡಗಾಡು ಜನಾಂಗದ ಕಾಳುಬಾಯಿ "ನಮ್ಮ ಮತಗಳನ್ನು ಇನ್ನು ಮುಂದೆ ಗುಪ್ತವಾಗಿಡುತ್ತೇವೆ. ಹಾಗೊಮ್ಮೆ ಗಂಡಸರು ಒತ್ತಡ ಹೇರಿದರೆ ಅವರಿಗೆ ಬೇಕಾದವರಿಗೆ ಹಾಕಿದೆವೆಂದು ಸುಳ್ಳು ಹೇಳುತ್ತೇವೆ. ಅದರಲ್ಲೂ ಮಹಿಳೆಯರಿದ್ದರೆ ನಮ್ಮೆಲ್ಲರ ಮತ ಮಹಿಳೆಗೇ" ಎನ್ನುತ್ತಾಳೆ, ಡಾ. ಜೆನ್ನಿ ಶ್ರೀವಾಸ್ತವ ಅವರು ನಡೆಸಿರುವ ಪ್ರಶ್ನೋತ್ತರ ಒಂದರಲ್ಲಿ.

ಇಷ್ಟಾದರೂ, ಪಂಚಾಯತ್ ಸಂಸ್ಥೆಗಳಲ್ಲಿ ಮಹಿಳೆಯರ ಪಾತ್ರ ನಿರೀಕ್ಷಿತ ಮಟ್ಟದಲ್ಲಿ ಇಲ್ಲ ಎನ್ನುವುದನ್ನು ಒಪ್ಪಿಕೊಳ್ಳಬೇಕು. ಇದಕ್ಕೆ ಕಾರಣಗಳು ಹಲವು -

ಮಹಿಳೆಯರ ಆರ್ಥಿಕ ಪರಾವಲಂಬನೆ, ಆಯ್ಕೆಯಾದ ಮಹಿಳೆಯರಿಗೆ ತರಬೇತಿ ಮತ್ತು ಮಾರ್ಗದರ್ಶನದ ಕೊರತೆ, ಅಧಿಕಾರವನ್ನು ಹಂಚಿಕೊಳ್ಳಲು ನಿರಾಕರಿಸುವ ಪುರುಷ ಪ್ರಧಾನ ಮೌಲ್ಯಗಳು ಹಾಗೂ ಆಡಳಿತ ವ್ಯವಸ್ಥೆಯಲ್ಲಿನ ದೋಷ.

"ಮಹಿಳೆಯರ ರಾಜಕೀಯ ಹಕ್ಕುಗಳನ್ನು ಹಾಗೂ ಅವಕಾಶಗಳನ್ನು ಅವರ ಆರ್ಥಿಕ ಹಕ್ಕುಗಳಿಂದ ಪ್ರತ್ಯೇಕಿಸಿ ನೋಡಲು ಸಾಧ್ಯವೇ ಇಲ್ಲ" ಎನ್ನುತ್ತಾರೆ ಅಖಿಲ ಭಾರತ ಜನವಾದಿ ಮಹಿಳಾ ಸಂಘಟನೆಯ ಪ್ರಧಾನ ಕಾರ್ಯದರ್ಶಿ ಬೃಂದಾ ಕಾರಟ್. ಪಶ್ಚಿಮ ಬಂಗಾಳ ಹಾಗೂ ಕೇರಳದ ಮಹಿಳಾ ಪಂಚಾಯತ್ ಸದಸ್ಯರ ಸಾಧನೆಗಳನ್ನು ಅವರ ಆರ್ಥಿಕ ಸ್ಥಿತಿಗತಿಗಳನ್ನು ಅಭ್ಯಸಿಸಿರುವ ಅವರು, 'ಆಸ್ತಿಯ ಹಕ್ಕು ಇರುವಂತಹ ಮಹಿಳೆಯರು, ಭೂ ಒಡೆತನದಲ್ಲಿ ಸಮಾನ ಪಾಲುದಾರರಾಗಿರುವ ಮಹಿಳೆಯರು ಆರ್ಥಿಕವಾಗಿ ಪರಾವಲಂಬಿಗಳಾಗದಿರುವ ಮಹಿಳೆಯರು ಪಂಚಾಯತ್ ಸಂಸ್ಥೆಗಳಲ್ಲಿ ಹೆಚ್ಚು ಯಶಸ್ವಿಯಾಗಿದ್ದಾರೆ' ಎನ್ನುತ್ತಾರೆ. ಆರ್ಥಿಕ ಪರಾವಲಂಬನೆ ಎನ್ನುವುದು ಬೌದ್ಧಿಕ ಪರಾವಲಂಬನೆಯನ್ನು ಹೇರುತ್ತದೆ. ಮಹಿಳೆಯರ mobilityಯನ್ನು ನಿಯಂತ್ರಿಸುತ್ತದೆ. ಅರಿವಿನ ಅವಕಾಶಗಳನ್ನು ಕಸಿದುಕೊಳ್ಳುತ್ತದೆ. ಮಹಿಳೆಯರ ಆರ್ಥಿಕ ಹಕ್ಕುಗಳನ್ನು ರಕ್ಷಿಸುವ ಸಮಾಜದಲ್ಲಿ ಅವರ ಅಭಿವೃದ್ಧಿಯ ಹಾದಿಯೂ ಸುಗಮವಾಗಿರುತ್ತದೆ.

ಪಂಚಾಯತ್ ಸಂಸ್ಥೆಗಳಿಗೆ ಆಯ್ಕೆಯಾಗಿ ಬಂದ ಮಹಿಳೆಯರಿಗೆ ಅತ್ಯಂತ ಜರೂರಾಗಿದ್ದ ತರಬೇತಿ ಹಾಗೂ ಮಾರ್ಗದರ್ಶನಗಳು ಸಿಗದೇ ಹೋಯಿತು. ಕರ್ನಾಟಕ ಚುನಾಯಿತ ಸದಸ್ಯೆಯರಿಗೆ ತರಬೇತಿ ನೀಡುವಲ್ಲಿ ಪ್ರಥಮ ಹೆಜ್ಜೆ ಇಟ್ಟಿತಾದರೂ ಅದರ ಕೇಂದ್ರೀಕೃತ ಸ್ವರೂಪ ಹಾಗೂ ಸ್ಥಗಿತತೆಯಿಂದಾಗಿ ಮಹಿಳೆಯರಿಗೆ ಅಗತ್ಯವಿದ್ದಷ್ಟು ನೆರವು ದೊರಕಲಿಲ್ಲ. ಪ್ರತಿ ವರ್ಷ ತಾಲ್ಲೂಕು, ಜಿಲ್ಲಾ ಹಾಗೂ ವಿಭಾಗ ಮಟ್ಟಗಳಲ್ಲಿ ನಿರಂತರ ತರಬೇತಿ ಒದಗಿಸಬೇಕೆಂಬ ಮಹಿಳೆಯರ ಬೇಡಿಕೆ ಈಡೇರಲಿಲ್ಲ. ಹೀಗಾಗಿ ಆಡಳಿತದ ಸ್ವರೂಪ, ರಾಜಕೀಯ ತಂತ್ರಗಾರಿಕೆ, ಪಂಚಾಯತ್‌ಗಳ ಅಧಿಕಾರ ವ್ಯಾಪ್ತಿ, ಪಂಚಾಯತ್ ಸದಸ್ಯೆಯರಾಗಿ ಅವರಿಗಿರುವ ಸಾಧ್ಯತೆಗಳು - ಅವಕಾಶಗಳು ಇತ್ಯಾದಿಗಳ ಬಗ್ಗೆ ಆ ಹೊಸ ಮಹಿಳೆಯರಿಗೆ ಪೂರ್ಣವಾದ ಜ್ಞಾನ ದೊರಕದೇ ಹೋಯಿತು.

ಇದಕ್ಕೆ ಕಿರೀಟವಿಟ್ಟಂತೆ ಸಹೋದ್ಯೋಗಿ ಪುರುಷರ ನಡವಳಿಕೆಗಳು ಹಾಗೂ ಸಮಾಜದ ಒಟ್ಟು ಸ್ಥಾಪಿತ ಮೌಲ್ಯಗಳು ಅವರು ಒಂದು ಹೆಜ್ಜೆ ಮುಂದೆ ಇಟ್ಟರೆ ಎರಡು ಹೆಜ್ಜೆ ಹಿಂದಕ್ಕೆ ಎಳೆದವು. ಆಸ್ತಿ ಹಾಗೂ ಅಧಿಕಾರದ ಮೇಲಿನ ಹಿಡಿತವನ್ನು ಯಾರೊಂದಿಗೂ ಹಂಚಿಕೊಳ್ಳಲು ಇಚ್ಛಿಸದ ಪುರುಷ ಪ್ರಧಾನ ವ್ಯವಸ್ಥೆ ಚುನಾಯಿತ ಮಹಿಳೆಯರನ್ನು ಸಮಾನರೆಂದು ಪರಿಗಣಿಸಲಿಲ್ಲ. ಸಭೆಗಳಲ್ಲಿ ಅವರ ಮಾತುಗಳಿಗೆ ಅಪಹಾಸ್ಯ ಮಾಡಿ ನಗುವುದು, ಮಹಿಳೆಯರಿಗೆ ಸಂಬಂಧಿಸಿದ ಯಾವುದೇ ವಿಷಯವನ್ನು ಲಘುವಾಗಿ ಪರಿಗಣಿಸುವುದು ಮುಂತಾದ ನಡವಳಿಕೆಗಳ ಮೂಲಕ ಮಹಿಳೆಯರು ಸಕ್ರಿಯವಾಗದಂತೆ ಮಾಡಲಾಗಿದೆ.

ಇವೆಲ್ಲಕ್ಕೂ ಮಿಗಿಲಾಗಿ ಆಡಳಿತ ವ್ಯವಸ್ಥೆಯಲ್ಲಿನ

ದೋಷಗಳು ಒಟ್ಟು ಪಂಚಾಯತ್ ವ್ಯವಸ್ಥೆಯ ಯಶಸ್ಸಿಗೇ ಒಂದು ತೊಡಕಾಗಿದೆ. ಪಂಚಾಯತ್‌ಗಳು ಅಧಿಕಾರ ವಿಕೇಂದ್ರೀಕರಣದ ಊರುಗೋಲುಗಳಾಗಬೇಕಿತ್ತು. ಆದರೆ ವಿಕೇಂದ್ರೀಕರಣದ ಹೆಸರಿನಲ್ಲಿ ಪಂಚಾಯತ್‌ಗಳನ್ನು ರೂಪಿಸಿದ ಸರ್ಕಾರಗಳು 'ಅಧಿಕಾರದ ವಿಕೇಂದ್ರೀಕರಣ'ವನ್ನು ಮಾಡಲಿಲ್ಲ. ಪಂಚಾಯತ್‌ಗಳಿಗೆ ಬೇಕಾದ ಸಂಪನ್ಮೂಲಗಳನ್ನು ಕ್ರೋಢೀಕರಿಸಿಕೊಳ್ಳುವುದಾಗಲಿ, ತನ್ನ ವ್ಯಾಪ್ತಿಗೆ ಸೇರಿದ ಎಲ್ಲದರ ಆಡಳಿತವನ್ನು ನಿಭಾಯಿಸುವುದಾಗಲಿ ಪಂಚಾಯತ್‌ನ ಅಧಿಕಾರಕ್ಕೆ ಸೇರುವುದಿಲ್ಲ. ತನ್ನ ಗ್ರಾಮದ ಅಭಿವೃದ್ಧಿಗೆ ಬೇಕಾದ ಯೋಜನೆ ರೂಪಿಸಿಕೊಂಡು, ಗ್ರಾಮದ ಅಗತ್ಯಕ್ಕೆ ತಕ್ಕಂತೆ ಯೋಜನೆಯನ್ನು ಜಾರಿಗೆ ತರುವ ಅಧಿಕಾರವೂ ಈ ಪಂಚಾಯತ್‌ಗಳಿಗೆ ಇಲ್ಲ. ಕೇಂದ್ರಿತ ಯೋಜನೆ, ಕೇಂದ್ರಿತ ಸಂಪನ್ಮೂಲ ನಿರ್ವಹಣೆ, ಕೇಂದ್ರಿತ ಆಡಳಿತ ಅಧಿಕಾರದ ವ್ಯವಸ್ಥೆಯಲ್ಲಿ ಪಂಚಾಯತ್‌ಗಳು ಕಾಗದದ ಮೇಲಿನ ಹುಲಿಗಳಂತಿವೆ.

ಉದಾಹರಣೆಗೆ ಒಂದು ಜಿಲ್ಲೆಯಲ್ಲಿ ಚುನಾಯಿತ ಸದಸ್ಯರನ್ನೊಳಗೊಂಡ ಜಿಲ್ಲಾ ಪಂಚಾಯತ್ ಅಸ್ತಿತ್ವದಲ್ಲಿದ್ದರೂ ಆ ಜಿಲ್ಲೆಯ ಕಾನೂನು ಪರಿಪಾಲನೆಯ ಅಧಿಕಾರ ಇರುವುದು ರಾಜ್ಯ ಸರ್ಕಾರಕ್ಕೆ ನೇರವಾಗಿ ಜವಾಬ್ದಾರವಾಗಿರುವ ಜಿಲ್ಲಾ ಆಡಳಿತಕ್ಕೆ. ಒಂದು ಜಿಲ್ಲೆಯ ಕೈಗಾರಿಕೆಗಳ ಅಭಿವೃದ್ಧಿಯಾಗಲಿ, ಅವುಗಳಿಂದ ತೆರಿಗೆ ಸಂಗ್ರಹಮಾಡುವುದಾಗಿ ಜಿಲ್ಲಾ ಪಂಚಾಯತ್ ವ್ಯಾಪ್ತಿಗೆ ಬರುವುದಿಲ್ಲ. ಬದಲಿಗೆ ಅದರ ನಿರ್ವಹಣೆ ರಾಜ್ಯ ಸರ್ಕಾರಕ್ಕೆ ಸೇರಿದ ಇಲಾಖೆಗಳಿಂದ, ಅಧಿಕಾರಿಗಳಿಂದ ಇಂತಹ ಸೀಮಿತ ಅಧಿಕಾರ ವಿಕೇಂದ್ರಿಕರಣವೂ ಮಹಿಳೆಯರ ಸಂಪೂರ್ಣ ಯಶಸ್ಸಿಗೆ ತೊಡರಾಗಿದೆ.

ಆದರೂ, ಇರುವ ಅವಕಾಶಗಳನ್ನೇ ಬಳಸಿಕೊಂಡು ಸಾಕಷ್ಟು ಸಾಧಿಸಬಹುದು. ಎನ್ನುವುದನ್ನು ಮಹಿಳೆಯರು ಮಾಡಿತೋರಿಸಿದ್ದಾರೆ. ದೇವಕಿ ಜೈನ್ ಅವರು ಹೇಳುವಂತೆ, "ಇಂದು ಬಡ ಮಹಿಳೆಯರು ಅಜೆಂಡಾಗಳನ್ನು ರೂಪಿಸುತ್ತಿದ್ದಾರೆ. ಅವರ ಈ ಪ್ರಯತ್ನಕ್ಕೆ ಮಾನ್ಯತೆಯೂ ದೊರಕುತ್ತಿದೆ. ಸರ್ಕಾರಗಳು ಅವುಗಳನ್ನು ಆಲಿಸುವುದನ್ನು ಕಲಿಯಬೇಕು. ಅವರಿಗೆ ಬೇಕಾದ ಸಂಪನ್ಮೂಲ ಹಾಗೂ ಸಹಕಾರ ಕೊಡುವುದನ್ನು ಕಲಿಯಬೇಕು."

## 'ಸತಿ' ಗೀತೆ

(ಶರಣು ಹೇಳೇವ್ರಿ ಸ್ವಾಮಿ - ರಂಗಗೀತೆಯ ರಾಗ)

ಯಾಕೆ ಹುಟ್ಟಿದೆಯಮ್ಮ ಈ ನೆಲದಲ್ಲಿ
ತಂಗಿ ಈ ನೆಲದಲ್ಲಿ ಇಲ್ಲಿ ಜೀವಂತ, ಇಲ್ಲಿ ಜೀವಂತ
ಸುಡುತಾರೆ 'ಸತಿ' ಹೆಸರಲ್ಲಿ

ಹೆಣ್ಣು ಮಕ್ಕಳು ನಾವು ವಿದ್ಯಾವ ಕಲಿತರೂ
ಬುದ್ಧಿಹೀನರ ಗತಿಗೆ ಕುಣಿಯೊದ್ಯಾಂಗೆ ॥ ೧ ॥

ಧರ್ಮ ದೇವರು ಅನ್ನುತ್ತಾರೆ ಕ್ರೂರರಂತೆ ಆಡುತ್ತಾರೆ
ಮಾನವ ಪ್ರೀತಿಯನ್ನೇ ತುಳಿದುಹಾಕ್ತಾರೆ ॥ ೨ ॥

ವಿಜ್ಞಾನ ಬೆಳೆಯುತ್ತಿದೆ ರಾಕೆಟ್ಟು ಹಾರುತ್ತಿದೆ
ಹಿಂದುಯುಗದ ಹೆಸರಿನಲ್ಲಿ ಹಿಂದೆ ಹೋಗ್ತಾರೆ ॥ ೩ ॥

ರೂಪ ಕನ್ವರಳ ದಾರಿ ತುಳಿಯೋದಿಲ್ಲ
ಮೆಟ್ಟಿಯೇ ನಿಲ್ಲುತ್ತೇವೆ ನಿಮ್ಮ ಬಡಿವಾರ ॥ ೪ ॥

- ಶಾಂತಾ ನಾಗರಾಜ್